# ಶ್ರೀ ವೇಂಕಟೇಶ್ವರ ದರ್ಶನ

॥ ಭಾಮಿನೀ ಷಟ್ಪದಿ ॥



ಪ್ರಕಾಶಕರು. ಸೋ. ಕೋ. ಶ್ರೀ.
ಅಪ್ಪುಗೊಂಡನಹಳ್ಳಿ

# ಶ್ರೀ ವೆಂಕಟೇಶ್ವರ ದರ್ಶನ

## (ಭಾಮಿನೀ ಷಟ್ಪದಿ)

"THIS BOOK IS PUBLISHED WITH THE FINANCIAL ASSISTANCE OF **THIRUMALA THIRUPATHI DEVASTHANAMS** UNDER THEIR SCHEME AID TO PUBLISH RELIGIOUS BOOKS"

ಸೋ. ಕೋ. ಶ್ರೀರಂಗಯ್ಯ
ನಿವೃತ್ತ ಮುಖ್ಯ ಶಿಕ್ಷಕರು

ಪ್ರಕಾಶಕರು :
ಸೋ ಕೋ ಶ್ರೀ
ಅಪ್ಪಗೊಂಡನಹಳ್ಳಿ

**ಅರ್ಪಣೆ**

ಮನೆತನದ ಮೊದಲನೇ ಕವಿತಾಶಕ್ತಿಯುತರಾದ
ಶ್ರೀ|| ಸ|| ನನ್ನಣ್ಣಯ್ಯ ಸೋ. ಕೋ. ಚನ್ನಯ್ಯನವರ
ದಿವ್ಯ ಪಾದಾರವಿಂದಗಳಿಗೆ—

SRI VENKATESHWARA DARSHANA
(Bhakti Kavya)
'Bhamini Shatpadi' In Kannada
by Sreerangaiah (So Ko Sri)
Published by So Ko Sri. Appagondanahalli
First Edition 1000 Copies 1998


ಮೊದಲನೇ ಮುದ್ರಣ - ೧೯೯೮


ಲೇಖಕರು : ಸೋ ಕೋ ಶ್ರೀ
(ಸೋಮಸಾಗರ ಕೋಡೀರಂಗಯ್ಯ ಶ್ರೀರಂಗಯ್ಯ)
ವಿಳಾಸ : ಅಪ್ಪಗೊಂಡನಹಳ್ಳಿ, ಸೋಮಸಾಗರ (ಅಗ್ರಹಾರ)
ಮಣ್ಣೆ ಅಂಚೆ, ನೆಲಮಂಗಲ ತಾಲ್ಲೂಕು,
ಬೆಂಗಳೂರು ಗ್ರಾ. ಜಿಲ್ಲೆ, ಕರ್ನಾಟಕ ರಾಜ್ಯ.

ಬೆಲೆ : ರೂ. ೨೫-೦೦

ಮುದ್ರಕರು : ಶ್ರೀ ವಿನಾಯಕ ಪ್ರಿಂಟರ್ಸ್,
ದೇವರಾಜ್ ವೃತ್ತ,
ತ್ಯಾಮಗೊಂಡ್ಲು - ೫೬೨ ೧೩೨,
ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.

# ಹೊಸ್ತಿಲು

ಮನುಷ್ಯನಲ್ಲಿ ಹುದುಗಿರುವ ಪ್ರತ್ಯೇಕ ಜಗತ್ತಿಗೆ 'ಕವಿ' ಎಂದು ಕರೆಯಬೇಕೆಂದು ವಿಕ್ಟರ್ ಹ್ಯೂಗೋ ಹೇಳಿದ್ದ. ಈ ಜಗತ್ತು ಬಹುತೇಕ ಎಲ್ಲರಲ್ಲೂ ಇರಬಹುದಾದರೂ ಅದನ್ನು ಇತರರಿಗೆ ತೋರಿಸಲು ಬೇಕಾದ ಸಾಮರ್ಥ್ಯ, ಛಲ ಇರುವವರು ಮಾತ್ರ ತೀರಾ ವಿರಳ. ಸೋಮಸಾಗರದ ಶ್ರೀರಂಗಯ್ಯನವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ನಿವೃತ್ತರಾಗುವವರೆಗೂ ತಮ್ಮೊಳಗಿನ ಈ ಜಗತ್ತನ್ನು ಅದುಮಿಟ್ಟುಕೊಂಡು ಈಗ ಅದನ್ನು ಪ್ರಕಟಿಸುತ್ತಿದ್ದಾರೆ.

ಭಾಮಿನಿ ಷಟ್ಪದಿಯಲ್ಲಿ ಅವರು ರಚಿಸಿದ ಈ ವೆಂಕಟೇಶ್ವರ ಮಹಿಮೆಯ ವೈಶಿಷ್ಟ್ಯ ಏನೆಂದರೆ, ದೈವಭಕ್ತಿ, ಶಾಸ್ತ್ರೀಯ ವಿಧಾನದ ಕಾವ್ಯ ರಚನಾ ಸಾಮರ್ಥ್ಯ ಹಾಗೂ ಅಂಥ ಕಾವ್ಯದ ರಸಾಸ್ವಾದನ ಸಾಮರ್ಥ್ಯ ಈ ಮೂರೂ ಮಾಯವಾಗುತ್ತಿರುವ ಸಂದರ್ಭದಲ್ಲಿ ಇದು ಸೃಷ್ಟಿಯಾಗಿದೆ. ಹಿಂದೆ, 15ನೇ ಶತಮಾನದಲ್ಲಿ ಕುಮಾರ ವ್ಯಾಸನಂಥವರು ಕಾವ್ಯ ಸೃಷ್ಟಿಗೆ ತೊಡಗಿದ್ದಾಗ ಕೃಷ್ಣಭಕ್ತಿ ಹಾಗೂ ಶಿವಭಕ್ತಿಯ ಮಹಾಪೂರವೇ ಅಂದಿನ ಸಮಾಜವನ್ನು ತೋಯಿಸಿತ್ತು. ಭಕ್ತಿಯ ಆ ಧಾರೆಯೇ ಮಹಾಭಾರತದಂಥ ಅಪೂರ್ವ ಕಾವ್ಯರಚನೆಗೆ ಸ್ಫೂರ್ತಿಯಾಗಿತ್ತು ಅಂದಿನ ಭಕ್ತಿ ಮಹಾಪೂರಕ್ಕೆ ಹೋಲಿಸಿದರೆ ಇಂದಿನದು ಮಹಾ ಬರಗಾಲವೆಂದೇ ಹೇಳಬಹುದು. ಶ್ರೀರಂಗಯ್ಯನವರ ಸ್ಫೂರ್ತಿಯ ಚಿಲುಮೆ ಈಗ ಭಾಮಿನೀ ಷಟ್ಪದಿಯ ರೂಪದಲ್ಲಿ ಚಿಮ್ಮಿದ್ದು ಅತ್ಯಂತ ವಿಶಿಷ್ಟವಲ್ಲದೆ ಮತ್ತಿನ್ನೇನು?

ಇಂದು ಇಂಥ ಕಾವ್ಯ ರಚನೆಗೆ ವಿಶೇಷವಾದ ಸಾಮರ್ಥ್ಯ ಮತ್ತು ಛಲ ಬೇಕಾಗುತ್ತದೆ. ಇಲ್ಲಿ ಕೇವಲ ಭಾವನೆಗಳ

ಸ್ಫುರಿತವಿದ್ದರಷ್ಟೇ ಸಾಲದು; ಮಾತ್ರೆ-ಗಣಗಳ ದೃಷ್ಟಿಯಿಂದಲೂ ಅದು ಶಾಸ್ತ್ರೋಕ್ತವಾಗಿ ಶುದ್ಧವಾಗಿರಬೇಕು. ಕ್ರಮೇಣ ಮರೆಯಾಗುತ್ತಿರುವ ಸಂಸ್ಕೃತ ಮತ್ತು ಹಳಗನ್ನಡ ಶಬ್ದ ಭಂಡಾರ ಕವಿಯಲ್ಲಿ ಸಮೃದ್ಧವಾಗಿರಬೇಕು. ಜತೆಗೇ, ಸಮಕಾಲೀನ ಸಾಹಿತ್ಯದಲ್ಲಿ ವಿಶೇಷ ಮನ್ನಣೆ ಗಳಿಸಲಾರದ ಈ ವಿಧಾನದಲ್ಲಿ ಕಾವ್ಯ ರಚಿಸಿ ಅದನ್ನು ಅಚ್ಚು ಹಾಕಿಸಲು ಅಪಾರ ಛಲ ಬೇಕು.

ಶ್ರೀರಂಗಯ್ಯನವರ ಈ ಕೃತಿಯಲ್ಲಿ ಇವೆಲ್ಲವೂ ಸ್ಫುಟವಾಗಿ ಕಾಣುತ್ತಿವೆ. ಹಾಗೆಯೇ, ಇಂದಿನ ಕಾಲದ ಉಪಭೋಗಾಸಕ್ತ ಜನರನ್ನು ಭಕ್ತಿಮಾರ್ಗಕ್ಕೆ ತೊಡಗಿಸಬೇಕೆಂಬ ತುಡಿತವೂ ಅವರ ಈ ಪದ್ಯಗಳಲ್ಲಿ ಕಾಣುತ್ತದೆ. ಹಿಂದೆ, ಕೃತ, ತ್ರೇತಾ ಮತ್ತು ದ್ವಾಪರ ಯುಗಗಳಲ್ಲಿ ಅಷ್ಟೆಲ್ಲ ಮೆರೆದು ಮಹಾ ಮಹಿಮೆ ತೋರಿದ ಶ್ರೀ ವೆಂಕಟೇಶ್ವರ ಈಗ ಮಾತ್ರ 'ಚತುರ ನೀನೆಂದೆಣಿಸಿ ಜಡ ಕಲ್ಲಾದೆ ಕಲಿಯುಗಕೆ' ಎಂದು ಹೇಳಿ (ಪದ್ಯ 13), ಆ ದೈವೀ ಶಕ್ತಿಯು ಸದ್ಯದ ಜಡತ್ವವೂ ಶ್ಲಾಘನೀಯವೆಂದು ಹೇಳುವಷ್ಟರ ಮಟ್ಟಿಗೆ ಮಾಸ್ತರರು ಚಾತುರ್ಯ ತೋರಿದ್ದಾರೆ !

ಹಾಗೆ ಜಡಕಲ್ಲಾಗಿ ಕೂತಿದ್ದು ದೇವರ ತಪ್ಪಲ್ಲವೆಂತಲೂ, ಭಕ್ತಿಯಿಂದ ಅಂಥ ನಿರ್ಜೀವ ಕಲ್ಲನ್ನೇ ಆರಾಧಿಸಿದಾಗ ಪ್ರತಿಯೊಬ್ಬರ ಮನಸ್ಸಿನಲ್ಲೂ ಆ ವೆಂಕಟೇಶ ಮತ್ತೆ ಮೂಡಿ ಬರುತ್ತಾನೆಂದೂ ಇನ್ನೊಂದು ಸಂದರ್ಭದಲ್ಲಿ ಹೇಳುತ್ತ, ಶ್ರೀರಂಗಯ್ಯನವರು ಮನೋವಿಜ್ಞಾನದ ಆಧುನಿಕ ತತ್ವವನ್ನೂ ಈ ಕಾವ್ಯದಲ್ಲಿ ನವಿರಾಗಿ ಸ್ಪರ್ಶಿಸುತ್ತಾರೆ.

ನಂಬಿದರೆ ಕಗ್ಗಲ್ಲೆ ದೈವವು
ನಂಬದಿರೆ ನಿಜದೈವ ಜಡಶಿಲೆ
ನಂಬಿಕೆಯು ಮನದೈಕ್ಯವಲ್ಲದೆ ಸಲ್ಲದನ್ಯಮತ ।

(ಪದ್ಯ 179)

ಹಾಗೆಂದು ನಂಬದೇ ಇದ್ದವರಿಗೆ ಇಲ್ಲಿನ ಈ ಭಕ್ತಿಕಾವ್ಯ ರುಚಿಸದೆಂದೇನೂ ಅರ್ಥವಲ್ಲ. ಶ್ರೀರಂಗಯ್ಯನವರ ವ್ಯಕ್ತಿತ್ವದಲ್ಲಿ ಹಾಗೂ ಲೇಖನಿಯಲ್ಲಿ ಓದುಗರನ್ನು ಮೃದುವಾಗಿ ತನ್ನೆಡೆ ಸೆಳೆದುಕೊಳ್ಳುವ ಗುಣ ಧಾರಾಳ ಇದ್ದಿರಲೇಬೇಕು. ಇದಕ್ಕೆ ನನ್ನಂಥ ಅಪ್ಪಟ ನಾಸ್ತಿಕನೊಬ್ಬ ಮುನ್ನುಡಿ ಬರೆದಿದ್ದೇ ಸಾಕ್ಷಿ!

12-1-1995
ಬೆಂಗಳೂರು

—ನಾಗೇಶ ಹೆಗಡೆ
ಮುಖ್ಯ ಉಪ ಸಂಪಾದಕರು
'ಸುಧಾ' ವಾರ ಪತ್ರಿಕೆ
ಬೆಂಗಳೂರು.

# ಮುನ್ನುಡಿ

ಕನ್ನಡ ಸಾಹಿತ್ಯ ಕ್ಷೇತ್ರದ ದ್ವಿತೀಯ ಸುವರ್ಣಯುಗವೆಂದು ಭಾವಿಸಿರುವ ಈ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಇದೇ ನೆಲಮಂಗಲ ತಾಲ್ಲೂಕು ಸೋಮಸಾಗರ ಗ್ರಾಮದ ರೈತಾಪಿ ಕುಟುಂಬದ ಶ್ರೀ ಕೋಡೀ ರಂಗಯ್ಯನವರ ಪುತ್ರರಾದ ಶ್ರೀಯುತ ಶ್ರೀರಂಗಯ್ಯನವರು ಬಹಳ ಶ್ರದ್ಧಾ ಭಕ್ತಿಗಳಿಂದ ಯಾವ ಕನ್ನಡ ಸಾಹಿತ್ಯ ಕ್ಷೇತ್ರದ ಕ್ರಿ. ಶ. 12ನೇ ಶತಮಾನದ ಕೊನೆಯಲ್ಲಿ ಸಾಹಿತ್ಯಯುಗ ಪ್ರವರ್ತಕನಾದ ಹರಿಹರನ ಸೋದರಳಿಯನೂ, ಶಿಷ್ಯನೂ ಮತ್ತು ಷಟ್ಪದೀ ಬ್ರಹ್ಮನೆನಿಸಿದ ಶ್ರೀ ರಾಘವಾಂಕ ಮಹಾಕವಿಯಿಂದ ಹೊಸದಾಗಿ ತಲೆ ಎತ್ತಿದ ಆರು ಷಟ್ಪದಿಗಳಲ್ಲೊಂದಾದ ಭಾಮಿನೀಷಟ್ಪದಿಯಲ್ಲಿ ರಚಿಸಿರುವ "ಶ್ರೀ ವೆಂಕಟೇಶ್ವರ ದರ್ಶನ" ಎಂಬ ಕೃತಿಯು ಒಂದು ಅಪೂರ್ವ ಕಲಾಕೃತಿ ಎಂಬುದರಲ್ಲಿ ಸಂಶಯವಿಲ್ಲ.

ಪುರಾಣಗಳಲ್ಲಿ ದೊರಕುವ ಶ್ರೀ ವೆಂಕಟೇಶ್ವರ ಮಹಾತ್ಮ್ಯೆಗಳನ್ನು ಸಂಗ್ರಹಿಸಿ ಕಲಿಯುಗದ ವೈಕುಂಠವೆಂಬುದನ್ನು ಹರಿಹರರಭೇದವೆನಿಸಿದ ಇವರು ಕಲಿಯುಗದ ಕೈಲಾಸವೆಂದು ಕರೆದಿರುವುದು ಇವರ ನೈಜ ದೈವಭಕ್ತಿಗೆ ಸಾಕ್ಷಿಯಾಗಿದೆ. ಈ ತಿರುಪತಿ ಎಂಬುದು ಅಂಜನಾದ್ರಿ, ಗರುಡಾದ್ರಿ, ಶೇಷಾದ್ರಿ, ನಾರಾಯಣಾದ್ರಿ, ವೃಷಭಾದ್ರಿ, ವೆಂಕಟಾದ್ರಿ ಮತ್ತು ಸಿಂಹಾದ್ರಿಗಳನ್ನೊಳಗೊಂಡ ಸಪ್ತಗಿರಿವಾಸನಾದ ಶ್ರೀನಿವಾಸ ಕಲ್ಯಾಣವನ್ನು ಅವರು ಈ ಭೂಲೋಕದಲ್ಲಿ ಅವತರಿಸಲು ಹಿಂದೆ ರಾಮಾವತಾರದಲ್ಲಿ, ಕೃಷ್ಣಾವತಾರದಲ್ಲಿ ವೇದಾವತಿಗೆ, ಸೀತಾಮಾತೆಗೆ, ಯಶೋದೆಗೆ ಕೊಟ್ಟ ಮಾತಿನಂತೆ ಈ ಕಲಿಯುಗದಲ್ಲಿ ಅವತರಿಸಿ ಕರವೀರಪುರದಲ್ಲಿ ಶ್ರೀ ಲಕ್ಷ್ಮೀಯನ್ನೂ, ತಿರುಪತಿ-

ಯಲ್ಲಿ ಶ್ರೀ ವೆಂಕಟೇಶ್ವರನೂ ಆಗಿ ನೆಲಸಿದ ಹಾಗೂ ಸಂದರ್ಭೋಚಿತವಾಗಿ ದೊರಕುವ ಎಲ್ಲಾ ಪುಣ್ಯಸ್ಥಳ ತೀರ್ಥ ಪುರುಷರ ಮಹಾತ್ಮ್ಯಗಳನ್ನು ಅವುಗಳ ಶ್ರೇಷ್ಠತೆಗಳನ್ನೂ ಸರಳವಾದ ಹಾಗೂ ಸುಂದರವಾದ ಭಾಮಿನೀಷಟ್ಪದಿ ಛಂದಸ್ಸಿನಲ್ಲಿ ಯಾವ ಮೂಲ ಕಥೆಗೂ ಧಕ್ಕೆಬಾರದಂತೆ ಶ್ರೀಯುತ ಶ್ರೀರಂಗಯ್ಯನವರು ರಚಿಸಿ ಈ ಶತಮಾನಾಂತ್ಯದಲ್ಲಿ ಓದುಗರ ಕೈಗೆ ಕೃತಿಯನ್ನಿತ್ತಿರುವುದು ಶ್ರೇಷ್ಠ ಶ್ಲಾಘನೀಯವೇ ಸರಿ.

ಶ್ರೀಯುತ ಶ್ರೀರಂಗಯ್ಯನವರು ಮಾಧ್ಯಮಿಕ ಶಾಲಾ ಶಿಕ್ಷಕರಾಗಿದ್ದು ಅವರೇ ಹೇಳಿರುವಂತೆ ಈ ಏಳು ಬೆಟ್ಟದೊಡೆಯನು ಅವರ ಮನಸ್ಸಿನಲ್ಲಿ ನೆಲೆಯೂರಿ ಈ ಕೃತಿಗೆ ಕಾರಣನಾಗಿರುವನೆಂದರೆ ತಪ್ಪಾಗಲಾರದು. ಹೇಗೆಂದರೆ ಈ ಭಾಮಿನೀಷಟ್ಪದಿ ಛಂದಸ್ಸಿನ ರಚನೆ ಅಷ್ಟೊಂದು ಸರಳ ರಚನಾ ಶೈಲಿಯಂತೂ ಅಲ್ಲ.

ಇದು ಶ್ರೀಯುತರ ಮೊದಲನೇ ಕೃತಿ ಶ್ರೀ ರಾಘವಾಂಕನ ಮಾತಿನಂತೆ 'ನಡೆಯುವರೆಡಹದೆ ಕುಳಿತವರೆಡಹುವರೆ' ಎಂಬಂತೆ ನಾಡಿಗರಾದ ಕನ್ನಡಿಗರು ಈ ಕೃತಿಯ ತಪ್ಪುನೆಪ್ಪುಗಳನ್ನೇ ಪರಿಗಣಿಸದೆ ಸರಿಪಡಿಸಿಕೊಂಡು ಓದಿ, ಅವರಿಂದ ಮುಂದೆಯೂ ಹೆಚ್ಚು ಹೆಚ್ಚು ಕನ್ನಡ ಸಾಹಿತ್ಯಸೇವೆ ಮುಂದುವರೆದು ಕನ್ನಡ ಸಾಹಿತ್ಯಲೋಕ ವಿಶಿಷ್ಟವಾಗಲೆಂದು ಪ್ರೋತ್ಸಾಹಿಸಲು ನಾನು ಓದುಗರೆಲ್ಲರ ಪರವಾಗಿ ಆ ದಯಾಮಯನಾದ ಭಗವಂತನು ಶ್ರೀಯುತ ಶ್ರೀರಂಗಯ್ಯನವರಿಗೆ ಹೆಚ್ಚಿನ ಸಾಹಿತ್ಯಸಂಪದಾರೋಗ್ಯ ಸೌಭಾಗ್ಯಗಳನ್ನು ಚಿರಕಾಲ ಕರುಣಿಸಲೆಂದು ಪ್ರಾರ್ಥಿಸುತ್ತಾ ಈ ಸತ್ಕಾರ್ಯಕ್ಕೆ ಪ್ರೇರಕರಾದ ಮಾನ್ಯಪುರ (ಮಂಡ್ಯ)ದ ಸರ್ಕಾರಿ ವೈದ್ಯಾಧಿಕಾರಿಗಳಾದ ಶ್ರೀಯುತ ಸಿದ್ದಣ್ಣ

ಸುಲ್ತಾನಪುರ್‌ರವರನ್ನು ಸ್ಮರಿಸಿ ಇಂತಹ ಒಂದು ಶ್ರೇಷ್ಠ ಕೃತಿಗೆ ಮುನ್ನುಡಿ ಬರೆಯುವ ಅವಕಾಶ ದೊರೆತಿದ್ದು ಆ ವೆಂಕಟೇಶ್ವರ ಸ್ವಾಮಿಯ ಕೃಪೆಯಿಂದೇ ಭಾವಿಸಿ ಈ ಕಿರುಕಾವ್ಯವು ಅತ್ಯಂತ ಜನಪ್ರಿಯವಾಗಲಿ ಎಂದೂ ಇದು ಆದಷ್ಟು ಬೇಗ ಮುದ್ರಿತವಾಗಿ ಹೆಚ್ಚು ಹೆಚ್ಚು ಸಹೃದಯರ ಕೈಸೇರಿ ಈ "ಶ್ರೀ ವೆಂಕಟೇಶ್ವರ ದರ್ಶನ" ಕಾವ್ಯವನ್ನು ಓದಿದವರಿಗೂ ಕೇಳಿದವರಿಗೂ ಇಹದಲ್ಲಿ ಕೀರ್ತಿಯೂ, ಪರದಲ್ಲಿ ಪದವಿಯೂ ಪ್ರಾಪ್ತವಾಗಲೆಂದು ಆಶಿಸುತ್ತಾ ಸರ್ವರಿಗೂ ಮಂಗಳವಾಗಲೀ ಎಂದು ಆ ವೆಂಕಟೇಶ್ವರನನ್ನು ಸದಾ ಪ್ರಾರ್ಥಿಸುತ್ತೇನೆ.

ಮಂಗಳಂ - ಶುಭಂ - ಮಂಗಳಂ

14-9-1993

ಶ್ರೀ ಜಯಶ್ರೀಪ್ರಿಯ
(ಕಾವ್ಯನಾಮ)

ಟಿ. ವಿ. ಗೋವಿಂದರಾಜು, ಎಂ.ಎ., ಬಿ.ಎಡ್.
ಕನ್ನಡ ಪಂಡಿತರು, ಸರ್ಕಾರಿ ಪ್ರೌಢಶಾಲೆ,
ಮಣ್ಣೆ, ನೆಲಮಂಗಲ ತಾಲ್ಲೂಕು.

" ಕಾಯಕವೇ ಕೈಲಾಸ "





ಕ್ರ. ಸಂಖ್ಯೆ : 2555/95-96 ತಾ। 11-1-1996

# ಸಂದೇಶ

ನೆಲಮಂಗಲ ತಾಲ್ಲೂಕು ಸೋಮಸಾಗರ ಗ್ರಾಮದ ಶ್ರೀ ಶ್ರೀರಂಗಯ್ಯನವರು ಭಾಮಿನೀಷಟ್ಪದಿಯಲ್ಲಿ ರಚಿಸಿರುವ " ಶ್ರೀ ವೆಂಕಟೇಶ್ವರ ದರ್ಶನ " ಭಕ್ತಿ ಕಾವ್ಯವನ್ನು ನೋಡಿ ಸಂತೋಷವಾಯಿತು.

ಭಕ್ತಿ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಅರಳಿದ ಒಂದು ವಿಶಿಷ್ಟ ಪ್ರಕಾರ. ಸಾಹಿತ್ಯ ಕೇವಲ ಮನರಂಜನೆಗಾಗಿ ಅಲ್ಲ.

ಆತ್ಮಸಾಕ್ಷಾತ್ಕಾರಕ್ಕಾಗಿಯೂ ಸಾಹಿತ್ಯವಿದೆ ಎಂಬುದನ್ನು ಕನ್ನಡ ಕವಿಗಳು, ಸಂತರು, ಶರಣರು, ದಾಸರು, ಕೈವಲ್ಯಕಾರರು, ಅನುಭಾವಿಗಳು ತೋರಿಸಿಕೊಟ್ಟಿದ್ದಾರೆ. ಪಂಪನನ್ನು ಮೊದಲುಗೊಂಡು ಕುವೆಂಪುವಿನವರೆಗೆ ಅಭಿವ್ಯಕ್ತಗೊಂಡ ಭಕ್ತಿ ಸಾಹಿತ್ಯ ಕನ್ನಡ ಸಾಹಿತ್ಯದ ಶ್ರೀಮಂತ ಆಗಿದೆ. ದೇವರು, ಬಸವಣ್ಣನವರಂದಂತೆ "ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿಪ್ರಿಯ" ನಾಗಿದ್ದಾನೆ. ಆ ಪರಾತ್ಪರ ವಸ್ತುವನ್ನು ಆರಾಧಿಸುವ ಮಾರ್ಗಗಳಲ್ಲಿ ಸಾಹಿತ್ಯ ರಚನೆಯೂ ಒಂದು.

ತಿರುಪತಿ ಸುಕ್ಷೇತ್ರ ಭರತಖಂಡದಲ್ಲಿ ಒಂದು ಪುಣ್ಯಸ್ಥಳ, ಅಸಂಖ್ಯಾತ ಆಸ್ತಿಕ ಬಂಧುಗಳನ್ನು ಆಕರ್ಷಿಸುತ್ತಿರುವ ಯಾತ್ರಾಸ್ಥಳ. ಶ್ರೀಕ್ಷೇತ್ರದ ಆದಿದೈವವಾದ ಶ್ರೀ ವೆಂಕಟೇಶ್ವರನನ್ನು ಕುರಿತು ರಚಿತವಾಗಿರುವ ಸಾಹಿತ್ಯ ಕೃತಿಯಾದ "ಶ್ರೀ ವೆಂಕಟೇಶ್ವರ ದರ್ಶನ" ಭಕ್ತಿ ಕಾವ್ಯವಾಗಿದೆ.

ಶ್ರೀನಿವಾಸನ ಕಥೆಯನ್ನು ಷಟ್ಪದಿಗಳಲ್ಲಿ ಸುಲಲಿತವಾಗಿ ಲೇಖಕರು ಹೇಳಿದ್ದಾರೆ. ಷಟ್ಪದಿಗಳು ಸುಂದರ ಸರಳವಾಗಿ ಅರಳಿವೆ, ಛಂದೋಬದ್ಧವಾಗಿವೆ. ಕಾವ್ಯ ಕಥೆಯ ಹರಿವಿಗೆಲ್ಲೂ ತೊಡಕಾಗದಂತೆ ನೇರವಾಗಿ ಓಡುತ್ತದೆ. ಶ್ರೀನಿವಾಸನನ್ನು ಭಕ್ತಿಯ ಆವೇಶದಲ್ಲಿ ಕೊಂಡಾಡುತ್ತದೆ. ಲೇಖಕರು ಕಥಾನಾಯಕ ಜನನ, ಪವಾಡ, ಲೋಕೋಪಕಾರಗಳನ್ನೆಲ್ಲ ಮೈದುಂಬಿ ಚಿತ್ರಿಸಿದ್ದಾರೆ. ತಿರುಪತಿಯಲ್ಲಿರುವ ವಿವಿಧ ಪ್ರೇಕ್ಷಣೀಯ ಸ್ಥಳಗಳನ್ನು ಸಚಿತ್ರಗೊಳಿಸಿದ್ದಾರೆ. "ಆದಿಪುರುಷ ಸತಿಯ ಸೋದರ 'ರಾಘವನ" ಎಂಬ ಷಟ್ಪದಿ ಕುಮಾರವ್ಯಾಸನ "ವೇದಪುರುಷನ ಸುತನ" ಎಂಬ ಪದ್ಯದ ಮತ್ತೊಂದು ರೂಪವಾಗಿದೆ.

ಲೇಖಕರ ಸದುದ್ದೇಶಪೂರ್ಣ ಈ ಪ್ರಯತ್ನ ಶ್ಲಾಘನೀಯ. ಕಾವ್ಯಾಭ್ಯಾಸದಿಂದ ಪುರುಷಾರ್ಥ ಪ್ರಾಪ್ತಿಯಾಗುತ್ತದೆನ್ನುತ್ತಾರೆ "ಶ್ರೀ ವೆಂಕಟೇಶ್ವರ ದರ್ಶನ"ವನ್ನು ಓದುವ, ಕೇಳುವ ಭಕ್ತಾದಿಗಳ ಇಷ್ಟಾರ್ಥಗಳು ಲಭಿಸಲಿ ಎಂದು ಆಶಿಸುತ್ತ, ಶ್ರೀರಂಗಯ್ಯನವರ ಸಾಹಿತ್ಯ ಕೃಷಿ ನಿರಂತರವಾಗಿ ಮುಂದುವರಿಯಲಿ, ವಾಚಕರು ಕಾವ್ಯವನ್ನು ಕೊಂಡು ಓದಿ ಪ್ರೋತ್ಸಾಹಿಸಲಿ, ಅವರ ಪ್ರಯತ್ನದಲ್ಲಿ ಯಶಸ್ಸುಂಟಾಗಲಿ ಎಂದು ಹಾರೈಸುತ್ತೇವೆ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ - 572 104,
ಕರ್ನಾಟಕ ರಾಜ್ಯ.

# ಒಂದು ಅನಿಸಿಕೆ

ಇತ್ತ ಸಾಹಿತ್ಯ ಕ್ಷೇತ್ರಕ್ಕೂ ಸೇರದ, ಅತ್ತ ಧಾರ್ಮಿಕ ಕ್ಷೇತ್ರದಲ್ಲಿಯೂ ಇರದ ನನ್ನನ್ನು ತಮ್ಮ ಕಾವ್ಯದ ಬಗ್ಗೆ ಒಂದು ಅನಿಸಿಕೆ ಬರೆಯಿರಿ ಎಂದು ಪೂಜ್ಯರಾದ ಶ್ರೀ ಶ್ರೀರಂಗಯ್ಯನವರು ಕೇಳಿದಾಗ ವಯಸ್ಸಿನಲ್ಲಿಯೂ ಬುದ್ಧಿಮತ್ತೆಯಲ್ಲಿಯೂ ಚಿಕ್ಕವನಾದ ನನಗೆ ಒಂದಷ್ಟು ದಿಗ್ಭ್ರಮೆಯಾಯಿತು. ನನ್ನ ಪರಮ ಪೂಜ್ಯ ಗುರುಗಳಾದ ಶ್ರೀ ಶ್ರೀ ಶ್ರೀ ಸೋಮನಾಥ ಸ್ವಾಮೀಜಿ ಗಳವರ ಕೃಪಾಶೀರ್ವಾದದಿಂದ ಕೆಲಮಟ್ಟಿಗೆ ಆಧ್ಯಾತ್ಮಿಕ ಒಲವು ಬೆಳೆಸಿಕೊಂಡಿರುವ ನಾನು ಅವರ ಮೊರೆಹೋಗಿಯೇ ಈ ಮಾತುಗಳನ್ನು ಬರೆಯುತ್ತಿರುವೆ.

ಕನ್ನಡ ಸಾಹಿತ್ಯ ಕ್ಷೇತ್ರದ ಹರವು ವಿಶಾಲವಾದುದು. ಅದರಲ್ಲೂ ಇತ್ತೀಚಿನ ದಿನಗಳಲ್ಲಿ ನವ್ಯ, ಸೃಜನಾತ್ಮಕ, ಸೃಜನೇತರ, ಬಂಡಾಯ, ದಲಿತ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲದೇ ಒಂದೆರಡಕ್ಷರ ಗೀಚಿ ಅದನ್ನು ಕಾವ್ಯವೆಂದು ಭ್ರಮಿಸುವವರೇ ಹೆಚ್ಚು. ಇಂತಹ ಸಂದಿಗ್ಧ ವಾತಾವರಣದ ಅರಿವು ನಮ್ಮ ಲೇಖಕರಿಗೆ ಇದೆಯೋ ಇಲ್ಲವೋ ಗೊತ್ತಿಲ್ಲ. ಗೊತ್ತಿಲ್ಲವೆಂಬುದೇ ಬಹ್ವಂಶ ನಿಜವೆಂದು ಭಾವಿಸುವೆ. ಏಕೆಂದರೆ "ಶ್ರೀ ವೆಂಕಟೇಶ್ವರ ದರ್ಶನ"ವನ್ನು ಶ್ರೀಯುತರು ಬರೆಯಲು ಪ್ರಾರಂಭಿಸಿದ್ದು ಸುಮಾರು ಹದಿನೈದು ವರ್ಷಗಳಷ್ಟು ಹಿಂದೆ. ಆಗ ಸಾಹಿತ್ಯಕ್ಷೇತ್ರ ಈಗಿನಷ್ಟು ಹೊಲಸಾಗಿರಲಿಲ್ಲ. ಅವಿರತವಾಗಿ ಐದು ವರ್ಷಗಳಷ್ಟು ದೀರ್ಘಕಾಲ ಶ್ರಮಿಸಿ ಅತ್ಯಂತ ಸುಂದರವಾದ "ಭಾಮಿನಿ ಷಟ್ಪದಿ"ಯಲ್ಲಿ ಈ ಕಾವ್ಯ ಹೊರಬಂದಾಗ "ರಾಜಕೀಯ"ದ ಗಾಳಿ ಬೀಸಲಾರಂಭವಾಗಿತ್ತು. ಹೀಗಾಗಿ ಅನೇಕ ಕಾರಣಗಳಿಂದಾಗಿ ಈ ಕಾವ್ಯವನ್ನು ಪ್ರಕಾಶಿಸುವ ಭಾಗ್ಯ ಬರಲಿಲ್ಲ. ಸುಮಾರು ಎರಡು ವರ್ಷಗಳ ಹಿಂದೆ ನಾನು "ಕಾವ್ಯ"ವನ್ನು ನೋಡಿ ನೀವೇ

ಏಕೆ ಇದನ್ನು ಪ್ರಕಾಶಿಸಬಾರದು? ಎಂದಾಗ ಹೇಗಾದರೂ ಮಾಡಿ ಇದನ್ನು ಮುದ್ರಿಸಲೇಬೇಕೆಂಬ ಸಂಕಲ್ಪ ಮೂಡಿಬಂತು. ಅಂತೂ ಇಂತೂ ಅವರ ನಿವೃತ್ತಿಯ ನಂತರ ಈ ಕೆಲಸಕ್ಕೆ ಕೈ ಹಾಕಿದ್ದಾರೆ. ಹಾಕಿದ ದುಡ್ಡು ಬರಬೇಕೆಂದೇನೂ ಅಲ್ಲ, ಭಗವಂತನ ಬಗ್ಗೆ ಬರೆದ ನಲ್ನುಡಿಗಳು ದಯಾಮಯನಾದ ಆ "ವೆಂಕಟೇಶ್ವರನ" ಪಾದ ಸೇರಲಿ ಎಂಬುದೇ ಅವರ ಸದಭಿಲಾಷೆ. ಅವರ ಸದಭಿಲಾಷೆ ಈಡೇರುವುದಷ್ಟೇ ಅಲ್ಲದೆ ಸಮಯ ಕೂಡಿ ಬಂದಾಗ ಮಹಾತ್ಮ-ರೊಬ್ಬರನ್ನು ಪ್ರೇರೇಪಿಸಿ ಆ ನಲ್ನುಡಿಗಳನ್ನು ಕೇಳುವ ಭಾಗ್ಯ-ವನ್ನೂ ಆ ಭಗವಂತನೇ ತಂದುಕೊಳ್ಳಬೇಕು.

ಕಾವ್ಯವನ್ನು ಸಮಗ್ರವಾಗಿ ಓದಿದಾಗ "ಒಂದು ಕಾವ್ಯ ಇಷ್ಟೊಂದು ಸುಂದರವಾಗಿ ಮೂಡಿ ಬರಬಲ್ಲುದೆ?" ಎಂದು ಒಂದು ಕ್ಷಣ ಯೋಚಿಸಿದೆ. ಸತ್ಯ ಕಣ್ಣ ಮುಂದಿನಲ್ಲಿಯೇ ಇದೆ. ಓದಿದಾಗ ತಾವೂ ಇದೇ ಭಾವನೆ ಹೊಂದಿ ಕೃತಾರ್ಥ ರಾಗುವಿರೆಂಬ ಪರಿಕಲ್ಪನೆ ನನಗಿದೆ. ಕನ್ನಡ ಸಾಹಿತ್ಯಕ್ಕೊಂದು "ಗರಿ" ಮೂಡಿ-ದಂತಿದೆ ಶ್ರೀ ಶ್ರೀರಂಗಯ್ಯನವರ "ಶ್ರೀ ವೆಂಕಟೇಶ್ವರ ದರ್ಶನ" ಸಾಹಿತ್ಯಕ್ಕೆ ಅವರು ನೀಡಿರುವ ಈ ಕೊಡುಗೆಯ ಮಹತ್ವ ಅವರಿಗೆ ಖಂಡಿತ ಗೊತ್ತಿಲ್ಲ. ಸಾಹಿತ್ಯ ಕ್ಷೇತ್ರದ ದಿಗ್ಗಜರು ಇದನ್ನು ಓದಿ ಆ ಮಹತ್ವದ ಅರಿವನು ಅವರಿಗೆ ಮೂಡಿಸುವಂತೆ ಮಾಡಿದರೆ ಅವರಿಗಿಂತಲೂ ಹೆಚ್ಚಾಗಿ ನಾನು ಕೃತಾರ್ಥನಾಗುವೆ.

ಶ್ರೀ ವೆಂಕಟೇಶ್ವರನ ಅನುಗ್ರಹವು ಅವರಿಗೆ ಅನುದಿನವೂ ಸಿಗಲೆಂದು ಪ್ರಾರ್ಥಿಸುವೆ.

25-3-1993 ಡಾ|| ಸಿದ್ದಣ್ಣ ಸುಲ್ತಾನ್‌ಪುರ್
ಎಂ.ಬಿ.ಬಿ.ಎಸ್.
ವೈದ್ಯಾಧಿಕಾರಿಗಳು, ಸರ್ಕಾರಿ ಆರೋಗ್ಯ ಘಟಕ, ಮಣ್ಣೂ.

# ನನ್ನ ಬಿನ್ನಪ

ದೈವ ಮಾನವಾಧಾರಕನಾದರೆ ಮಾನವ ದೈವಾರಾಧಕ-ನಾಗಿರಬೇಕಾದುದು ಸತ್ಯಯುತ ತತ್ವವೆಂಬುದು ಮಾನವನ ಅರಿವಾಗಿರಬೇಕು.

ಜೀವನದಲ್ಲಿ ನಿತ್ಯಶಕ್ತಿಯುಕವಾದ ವಿಜ್ಞಾನವದೆಷ್ಟೇ ಪ್ರಭಾವಯುತವಾದರೂ ನಿತ್ಯ ಸತ್ಯಸಂಪದವಾದ ದೈವಶಕ್ತಿಯ ಮುಂದೆ ಅದು ಅಲ್ಪವೆಂದೇ ಭಾವಿಸಬೇಕು.

ದೈವದತ್ತವಾದ ಪಂಚಭೂತಗಳ ಪ್ರಭಾವಪೂರಿತರಾಗಿ ಜೀವಿಸುತ್ತಿರುವ ಸಕಲ ಚರಾಚರಗಳಿಗೆಲ್ಲಾ ಆ ಪರಾತ್ಪರ-ಮೂರ್ತಿಯೇ ಮೂಲಕಾರಣವೆಂಬುದನ್ನು ನೆನೆದು ಆವನನ್ನು ಆರಾಧಿಸಬೇಕಾದುದು ಸಕಲ ಜ್ಞಾನಜೀವಿಗಳ ಕರ್ತವ್ಯ.

ಅಂತಹ ಆರಾಧನೆಗೆ ಚಿಂತನೆ, ಪೂಜೆ, ಧ್ಯಾನ, ಪಠಣ, ಮುಂತಾದವುಗಳು ಒಂದೊಂದು ಮಾಧ್ಯಮ. ಅಂತಹ ಪಠಣಕ್ಕೆ ಅಗತ್ಯವಾದ ಒಂದು ದೈವಗ್ರಂಥವು ಅಗತ್ಯವೆಂದು ಭಾವಿಸಿ ಈ ಕಲಿಯುಗದಾಕಾರನಾದ ಆ ಶ್ರೀ ವೆಂಕಟೇಶ್ವರಸ್ವಾಮಿಯ ಮಹಿಮೆಗಳನ್ನೊಳಗೊಂಡ "ಶ್ರೀ ವೆಂಕಟೇಶ್ವರ ದರ್ಶನ" ಎಂಬ ಈ ಕೃತಿಯನ್ನು ಕನ್ನಡದಲ್ಲಿ ಭಾಮಿನೀ ಷಟ್ಪದಿ ಛಂದಸ್ಸಿನಲ್ಲಿ ಆ ಸ್ವಾಮಿಯ ಮೂಲಕಥೆಗೆ ಯಾವ ಭಂಗವೂ ಬಾರದಂತೆ ಅವನ ಕಥೆಗಳ ಕೆಲವು ಪುಸ್ತಕಗಳನ್ನಾಧರಿಸಿ ಮಹಾ ಮಹಿಮರುಗಳು ಆರಾಧಿಸಿರುವ ಆ ಕನ್ನಡಮ್ಮನ ಪೂಜೆಗೂ ಒಂದು ಕುಸುಮ ದಳವನ್ನಾದರೂ ಅರ್ಪಿಸಿ ಈ ನನ್ನ ಕನ್ನಡ ನಾಡಿನ ಜೀವ ಸಾರ್ಥಕವಾಗಲೆಂದು ಭಾವಿಸಿ ಈ ಕೃತಿಯನ್ನು ಆ ಕನ್ನಡ ತಾಯಿಯ ಪೂಜೆಗೆ ಅರ್ಪಿಸುತ್ತಿದ್ದೇನೆ.

ದೇವರು ನಿರಾಕಾರನಾದರೂ ಭಕ್ತರುಗಳ ಭಾವನಾಕಾರಿಯಾಗಿರುತ್ತಾನೆಂಬುದನ್ನು ಈ ಕಥೆಯು ದೃಢೀಕರಿಸುತ್ತದೆ.

ಈ ಗ್ರಂಥದ ರಚನೆಗೆ ಆ ಶ್ರೀನಿವಾಸನೇ ನೈಜ ಪ್ರೇರಕನಾಗಿರುತ್ತಾನಲ್ಲದೆ ನನ್ನ ತಂದೆ ಕೋಡಿರಂಗಯ್ಯನವರ ಪೌರಾಣಿಕ ಗ್ರಂಥಗಳ ವಾಚನಾಶಕ್ತಿ, ತಾಯಿ ತಿಮ್ಮಕ್ಕನವರ ದೈವಭಕ್ತಿ ಮತ್ತು ನಮ್ಮ ವಂಶದ ಮೊದಲನೇ ಕವಿತಾಶಕ್ತಿಯುತರಾದ ನನ್ನಣ್ಣಯ್ಯ ಚನ್ನಯ್ಯನವರ ಕವಿತಾಶಕ್ತಿಯೂ ನನ್ನ ಈ ರಚನೆಗೆ ಮುಖ್ಯ ಪ್ರಭಾವವನ್ನು ಬೀರಿವೆಯೆಂದು ಭಕ್ತಿಯಿಂದ ಸ್ಮರಿಸುತ್ತೇನೆ.

ಈ ಕೃತಿಯು ಸುಮಾರು ಎಂಬತ್ತರ ದಶಕದಲ್ಲಿಯೇ ಪೂರ್ಣಗೊಂಡಿತ್ತಾದರೂ ಸಜ್ಜನರುಗಳ ಪ್ರೇರಣೆಯಿಂದ ಈಗ ಅಚ್ಚಾಗಿ ಹೊರಬಂದಿರುತ್ತದೆ.

ಈ ಕಾರ್ಯಕ್ಕೆ ಮೊದಲನೇ ಪ್ರೋತ್ಸಾಹಕರು ಮತ್ತು ಈ ಪುಸ್ತಕಕ್ಕೆ 'ಒಂದು ಅನಿಸಿಕೆ' ಎಂಬ ತಮ್ಮ ಅಮೂಲ್ಯವಾದ ನುಡಿಗಳನ್ನು ಬರೆದುಕೊಟ್ಟು ಕೃತಿಗೆ ಮೆರಗು ನೀಡಿರುವ ಶರಣ ಗುರು ಸ್ವರೂಪಿಗಳು, ಆಧ್ಯಾತ್ಮಿಕಾವಲಂಬಿಗಳು ಆದ ಸನ್ಮಾನ್ಯ ಡಾ|| ಸಿದ್ದಣ್ಣ ಸುಲ್ತಾನಪುರ್, ಎಂ.ಬಿ.ಬಿ ಎಸ್. ವೈದ್ಯಾಧಿಕಾರಿಗಳು ಸರ್ಕಾರಿ ಪ್ರಾಥಮಿಕ ಆರೋಗ್ಯ ಘಟಕ, ಮಣ್ಣೆ ಇವರಿಗೆ ನನ್ನ ಭಕ್ತಿಪೂರ್ವಕ ವಂದನೆಗಳು.

ಈ ಗ್ರಂಥಕ್ಕೆ ತಮ್ಮ ಶುಭ ಸಂದೇಶವನ್ನಿತ್ತು ಕರುಣೆಯಿಂದ ಆಶೀರ್ವದಿಸಿರುವ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀಮನ್ ನಿ|| ಪ್ರ|| ಸ್ವ|| ಡಾ|| ಶಿವಕುಮಾರ ಸ್ವಾಮೀಜಿಯವರ ದಿವ್ಯ ಪಾದಾರವಿಂದಗಳಿಗೆ ಭಕ್ತಿಯಿಂದ ವಂದಿಸಿ ಕೃತಾರ್ಥನಾಗುತ್ತೇನೆ.

ಇದಕ್ಕೆ 'ಹೊಸ್ತಿಲು' ಎಂಬ ಶಿರೋನಾಮೆಯಿಂದ ತಮ್ಮ ಆತ್ಮಾಭಿಮಾನದ ಚಿಲುಮೆಯ ಭವ್ಯ ನುಡಿಗಳಿಂದ ಈ ಕಾವ್ಯಕ್ಕೆ ಶೃಂಗಾರ ರಸವನ್ನಿತ್ತು ನನ್ನ ಮೇಲಿನ ಮರೆಯಲಾಗದ ಅಭಿಮಾನವನ್ನು ಇಮ್ಮಡಿಗೊಳಿಸಿರುವ ನನ್ನ ಆತ್ಮೀಯ ಮಿತ್ರ ಬಂಧುವೂ ಕನ್ನಡ ಸಾಹಿತ್ಯ ಸಂಪದರು ಹಾಗೂ ವಿಜ್ಞಾನ ವಿಶೇಷ ತಜ್ಞರೂ ಆಗಿ 'ಪ್ರಜಾವಾಣಿ' ಪತ್ರಿಕಾಲಯದಲ್ಲಿ 'ಸುಧಾ' ವಾರಪತ್ರಿಕೆಯ ಪ್ರಧಾನ ಉಪ-ಸಂಪಾದಕರಾಗಿ ರಾರಾಜಿಸುತ್ತಿ-ರುವ ಶ್ರೀಯುತ ನಾಗೇಶ್ ಹೆಗಡೆಯವರಿಗೆ ನಾನು ಸದಾ ಕೃತಜ್ಞ.

ಈ ಗ್ರಂಥಕ್ಕೆ ಮುನ್ನುಡಿಯನ್ನಿತ್ತು ತಮ್ಮದೇ ಆದ ಒಂದು ವೈಶಿಷ್ಟ್ಯವನ್ನು ಈ ಕಾವ್ಯಕ್ಕೆ ಬೀರಿರುವ ನನ್ನ ಸನ್ಮಿತ್ರರಾದ ಶ್ರೀಯುತ ವಿ. ಗೋವಿಂದರಾಜು, ಎಂ.ಎ. ಕನ್ನಡ ಪಂಡಿತರು, ಸರ್ಕಾರಿ ಪ್ರೌಢಶಾಲೆ, ಮಣ್ಣೆ. ಇವರಿಗೆ ನನ್ನ ಅಭಿವಂದನೆಗಳು.

ಈ ಪುಸ್ತಕದ ಮುದ್ರಣ ಕಾಲದಲ್ಲಿ ಅಗತ್ಯವಾದ ತಿದ್ದು-ಪಡಿಗಳು ಮತ್ತು ಸಕಾಲಿಕ ಮಾರ್ಗದರ್ಶನಗಳನ್ನಿತ್ತು ಕೃತಿಗೆ ವಿಶೇಷ ರೀತಿಯ ಸಹಾಯ ಮಾಡಿ ಕಲಾಕುಶಲರೆನಿಸಿ ಕನ್ನಡ ಸಾಹಿತಿಯೂ ಆಗಿ ಮಿನುಗುತ್ತಿರುವ ನನ್ನ ಅಭಿಮಾನದ ಹೆದ್ದೊರೆ ಶ್ರೀಯುತ ಶ್ಯಾಮಗೊಂಡ್ಲು ಅಂಬರೀಷ್‌ರವರಿಗೆ ನನ್ನ ನಮನ-ಗಳು.

ಈ ಪುಸ್ತಕ ಪ್ರಕಾಶನಕ್ಕೆ ಪ್ರೋತ್ಸಾಹಧನ ನೀಡಿ ಸಹಾಯ ಮಾಡಿರುವ ತಿರುಪತಿಯ ಟಿ.ಟಿ.ಡಿ. ಸಂಸ್ಥೆಯವರಿಗೆ ನಾನು ಚಿರಋಣಿ.

ಈ ಪುಸ್ತಕದ ಹಸ್ತಪ್ರತಿಗಳನ್ನು ಅಂದವಾಗಿ ಬರೆದು-ಕೊಟ್ಟು ಸಹಕರಿಸಿದ ನನ್ನ ಮಿತ್ರರಾದ ಶ್ರೀ ಎಂ.ಸಿ. ಮಲ್ಲಯ್ಯ, ನಿವೃತ್ತ ಮಂ॥ ಶಿಕ್ಷಕರು, ಶ್ರೀ ಎನ್. ಸತ್ಯನಾರಾಯಣ, ಎಂ.ಇ. ಶ್ರೀ ಸಿ. ನರಸಿಂಹಯ್ಯ, ನಿ॥ ಶಿ॥, ಮಣ್ಣೆ ಮತ್ತು ಶ್ರೀಮತಿ ಬಿ. ಕೆ. ವಿನೋದಮ್ಮ, ನಿ॥ಶಿ॥, ತುಮಕೂರು ಇವರುಗಳಿಗೆ ನನ್ನ ಮರೆಯಲಾಗದ ಸವಿನೆನಪುಗಳು. ಇದಕ್ಕೆ ಎಲ್ಲಾ ರೀತಿಯಲ್ಲೂ ಪ್ರೋತ್ಸಾಹಿಸಿದ ಎಲ್ಲಾ ನನ್ನ ಸನ್ಮಿತ್ರರುಗಳು ಹಾಗೂ ಎಲ್ಲಾ ಅಭಿಮಾನಿಗಳಿಗೂ ನನ್ನ ಧನ್ಯವಾದಗಳು.

ಈ ಪುಸ್ತಕವನ್ನು ಅಂದವಾಗಿ ಹಾಗೂ ಸುಲಲಿತವಾಗಿ ಮುದ್ರಿಸಿಕೊಟ್ಟು ಸಹಾಯ ಮಾಡಿದ ತ್ಯಾಮಗೊಂಡ್ಲು ಶ್ರೀ ವಿನಾಯಕ ಮುದ್ರಣಾಲಯದ ಮಾಲೀಕರಾದ ಶ್ರೀ ಡಿ.ಕೇಶವನ್ ರವರಿಗೆ ನನ್ನ ಧನ್ಯವಾದಗಳು.

ಈ ಪುಸ್ತಕವನ್ನು ಓದಿ ಆ ಶ್ರೀನಿವಾಸನ ಕೃಪೆಗೆ ಪಾತ್ರ-ರಾಗಿ ನನ್ನನ್ನು ಆಶೀರ್ವದಿಸುವ ನನ್ನ ಎಲ್ಲಾ ಕನ್ನಡಾಭಿಮಾನಿ ಗಳಿಗೂ ನನ್ನ ವಂದನೆಗಳು.

ಸೋ ಕೋ ಶ್ರೀ<br>
(ಕಾವ್ಯನಾಮ)

ಸೋಮಸಾಗರ ಕೋಡೀರಂಗಯ್ಯ ಶ್ರೀರಂಗಯ್ಯ<br>
(ನಿವೃತ್ತ ಮುಖ್ಯ ಶಿಕ್ಷಕರು),<br>
ವಾಸ : ಅಪ್ಪಗೊಂಡನಹಳ್ಳಿ, ಮಣ್ಣೆ ಅಂಚೆ,<br>
ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ.

# ವಿಷಯಾನುಕ್ರಮಣಿಕೆ

# ಪೀಠಿಕಾ ಪ್ರಕರಣ

ಶ್ರೀ ವರನೆ ಕೌಂತೇಯಸೂತ ಸು
ಧಾ ವಿಲಾಸ ಸುರೇಂದ್ರ ವಂದ್ಯಸ
ಜೀವಕೋಟಿ ಪುನೀತ ಮುನಿಸಂಜಾತ ಸಚ್ಚರಿತ
ರಾವಣಾನುಜಗಭಯ ವಿತ್ತ ದ
ಶಾವತಾರ ವಿಹಾರಿ ಶ್ರೀಹರಿ
ಶಾಶ್ವದ್ಯ ದೀನಜನ ಪಾವನ ವೀರ ನಾರಯಣ ॥ ೧

ಶರಣಸಂಕುಲ ವರದ ಹಸ್ತನೆ
ಪರಮ ಪಾವನ ಚರಣ ಉರಗಾ
ಭರಣ ಮೂಪುರದಾನವರಿಪು ಸಂಹರಣ ಸರ್ವಗುಣ ।
ವಿರಹ ನಟನ ವಿಹಾರಿ ಗೌರೀ
ವರನೆ ಗಂಗಾಧರನೆ ನೀ ಕರು
ಕರಿಸಿ ಕುಣಿದಾಡೆನ್ನ ಕರದಲಿ ಹರನೆ ಶಂಕರನೆ ॥ ೨

ಷೋಡಶವಿಯಲಿ ಗಜರಾಜ ವದನನೆ
ಸಡಗರದ ಸರ್ವಾಗ್ರ ಪೂಜ್ಯನೆ
ಉಡುಪಧರ ಸುಕುಮಾರ ರಚನಾಕಾರಗುಣನಿಕರ ।
ಮೃಡನ ಮೊದಲಾದಖಿಳ ಸುರಗುಣ
ಷೋಡಶಮುಡುಕ ಭಜಿಸುವರು ನಿನ್ನನು
ಕಡುಕರುಣೆ ಕರ ನೀಡಿಕೊಡು ಪರಮಾರ್ಥ ಕೀರ್ತನೆಯ ॥ ೩

ವಾರಿಜೋದ್ಭವನರಸಿ ವಿವಿಧ ವಿ
ಚಾರ ಚರಿತಾಗಮ ಪುರಾಣೋ
ದ್ಧಾರ ಮಧುರಾನಾದ ರೂಪಿಣಿ ನಿತ್ಯಪಾರಯಣೆ ।
ಸಾರಮಯ ಸತ್ಕೃತಿಗೆ ನೀ ಕೃಪೆ
ದೋರಿ ಕೊಡು ವಾಗ್ಝರಿಯ ಜಿಹ್ವೆಗೆ
ಶಾರದನ ವರಮಾತೆ ಸಕಲ ಪುನೀತೆ ಸರಸತಿಯೆ ॥ ೪

ಸೋಮ ಸೂರ್ಯಾದ್ಯ ಖಿಳ ಸುರಗಣ
ನೇಮದಿಂ ಭಜಿಸುವರು ನಿನ್ನಯ
ನಾಮ ಚರಿತಾಮೃತವ ಮುಕ್ತಿಗೆ ಯುಕ್ತ ಪಥವೆಂದು ।
ಕೋಮಲಾಂಗ ಕೃಪಾಂಗ ಕರುಣಾ
ಧಾಮ ದನುಜ ವಿರಾಮ ಪವನಜ
ಪ್ರೇಮ ಸೀತಾರಾಮ ರಕ್ಷಿಸು ಭಕ್ತ ಸಂಕುಲವ ॥ ೫

ರಂಗಮಯ ಸರ್ವಾಂಗ ಚೇತನ
ರಂಗ ರಂಗನುತಾಂಗ ಪದ್ಮಾ
ಲಿಂಗಿತಾಂಗ ಶುಭಾಂಗ ವಾರಿಜ ವದನ ಶ್ರೀರಂಗ ।
ರಂಗ ಭಕ್ತ ಜನಾಂಗ ಮಂಗಳ
ರಂಗ ಪಟ್ಟಣಾಪುರದ ಕೋಡೀ
ರಂಗನಾಥ ಕೃಪಾಂಗ ರಕ್ಷಿಸು ನಮ್ಮನನವರತ ॥ ೬

ಆದಿ ಬ್ರಹ್ಮನ ಮಾತೆ ಮಂನಿಸನ
ಕಾದಿ ವಂದಿತೆ ಸಾಗರೋದ್ಭವೆ
ವೇದ ಪುರುಷನ ಮಡದಿ ಸಿರಿಸಂಪದಕೆ ಮುಖ್ಯನಿಧಿ ।
ಸಾಧುಜನ ಸಂತುಷ್ಟದಾಯಕಿ
ನಾದಮಯೆ ಭೋಗ ಪ್ರದಾಯಿನಿ
ಮೇದಿನಿಗೆ ಧನಲಕ್ಷ್ಮಿ ಕೊಡೆಮಗೆ ಸಿರಿಯಸಂಪದವ ॥ ೭

ರಾಮದೂತನೆ ಜನಕಸುತೆ ಸು
ಕ್ಷೇಮದಾತನೆ ದನುಜಕುಲ ನಿ
ರ್ನಾಮ ಪಾತ್ರನೆ ವಾಯುಪುತ್ರನೆ ವಜ್ರಕಾಯಕನೆ ।
ರಾಮ ಲಕ್ಷ್ಮಣ ಸೀತೆಯರ ಮನ
ಧಾಮ ನೀನೆನಗೊಲಿದು ರಕ್ಷಿಸು
ಸೋಮಸಾಗರದಾಂಜನೇಯನೆ ನಿನ್ನ ಪದತಲದಿ ॥ ೮

ಉರಗಧರ ವಲ್ಲಭೆಯೆ ಸುರನುತ
ಪರಮ ಪಾವನ ಚರಣೆ ಮಹಿಷಾ
ಸುರನ ಮರ್ಧಿನಿ ಸರ್ವಮಂಗಳೆ ನಿತ್ಯಕಾತ್ಯಾಯಿನಿ ।
ಕರುಣಾ ರಸಮಯಿಧಾರೆ ಶಂಕರಿ
ಶರಣ ಸಂಕುಲವರದೆ ನೀ ಕನಿ
ಕರುಣಿಸೌ ಗಜಗೌರಿ ನೆನೆದಾಭೀಷ್ಟ ಸಂಪದವ ॥ ೯

ಹರಿ ಮಿಗಿಲು ಹರಗಿಂತ ಸರ್ವಕೆ
ಹರ ನಧಿಕ ಹರಿಗಿಂತಲೆನ್ನುತ
ಹರಿ ಹರಾದಿ ಬ್ರಹ್ಮರಾರೆಂಬುವುದು ಗಹನಮತ ।
ಹರಿ ಹರರು ಬೇರಲ್ಲ ಸೃಷ್ಟಿಯ
ಸರಸದೊಳಗೆರಡಾರಿದಲ್ಲದೆ
ಪರಮ ಮಂಗಳಮೂರ್ತಿಯೊಬ್ಬನೆ ಸರ್ವ ಚೇತನನು ॥ ೧೦

ಹರಿವರದ ಕಾಳಿಂಗ ಮರ್ಧನ
ಕಿರುಕುಳದ ಕೇಶಪತಿ ಪರ್ಧನ
ಕುರು ಕುಲದ ಕೂರಂಬ ಬಂಹಕೆ ಕೃಷ್ಣನೀಕ್ರೂರ ।
ಪರಭವಕೆ ಕೇಶವನೆ ನೀ ಕೈ
ವರಿದು ಕೊಡು ಕೋವಿದರ ಕೌಸ್ತುಭ
ಸಿರಿಯ ನೀ ಶ್ರೀರಂಗ ನಿನ್ನಯ ಕಂದ ಕಾಮನಿಗೆ ॥ ೧೧

ಕಲಿಯುಗದ ಕೈಲಾಸ ತಿರುಪತಿ
ಒಲಿದವರ ಭವನಾಶ ಭಕ್ತರು
ಗಳಿಗೆ ಚಿತ್ರಪ್ರಕಾಶ ಶ್ರೀಮದ್ ವೆಂಕಟೇಶ್ವರನು ।
ಆಳಿಯಲಳವಲ್ಲವನ ಮಹಿಮಾ
ವಳಿಯ ದಿಕ್ತಟದೊಳಗೆ ಮನುಮುನಿ
ಕುಲದ ಕವಿತಾಜಾಲ ಪಂಧಿಯೊಳಿಲ್ಲ ಮಹಿಮೆಯನು ॥ ೧೨

ಕೃತಯುಗದೊಳೊಡನಾಡಿ ತ್ರೇತೆಗೆ
ಪತಿತ ಪಾವನನಾಗಿ ದ್ವಾಪರ
ಚತುರ ನೀನೆಂದೆನಿಸ ಜಡಕಲ್ಲಾದೆ ಕಲಿಯುಗಕೆ ।
ಕೃತಿಗೆ ಶ್ರೇಷ್ಠನು ನೀನು ನಿಜಸ
ದ್ಗತಿಗೆ ಕಾರಣನಾಗಿ ಮನು ಸಂ
ತತಿಗೆ ನಿಜದಾಕಾರ ತೋರದೆ ಮುಗ್ಧಗೊಳಿಸಿರುವೆ ॥ ೧೩

ಪೇಳಲಿದು ಬಹುಸವಿಯು ಜಿಹ್ವೆಗೆ
ಕೇಳಲಿದು ಸುಶ್ರೇಷ್ಠ ಕಿವಿಗಳ
ಗಾಸಲ್ಕೇಕೈಕ ಚಿತ್ತ ವಿಕಾಸ ಮಾನಸಿಕ ।
ಬಾಳಿಗಿದು ನಿಜ ಭಾಗ್ಯರತ್ನ ವಿ
ಶಾಲ ಮತಿಯ ಪ್ರಕಾಶ ಕಥೆಯಿದು
ಹಾಲುಜೇನಿನ ಸವಿಯು ಮುಕ್ತಿಯ ಮಾರ್ಗದರುಶನಕೆ ॥ ೧೪

ನರರುಗಳಿಗಿದು ಕ್ಷೀರ ಸುರರಿಗೆ
ಪರಮ ಪುರಷಾಕಾರ ಭಕ್ತರ
ಮೊರೆಗೆ ಸಾಕ್ಷಾತ್ಕಾರ ಕಲಿಯುಗದಾತ ನವತಾರ ।
ಪರಿಪರಿಯ ಶೃಂಗಾರ ರಸಮಯ
ಸಿರಿಯು ಶ್ರೀಮದ್ ವೆಂಕಟೇಶ್ವರ
ಚರಿತೆಯಿದ ಶ್ರೀರಂಗ ರಚಿಸಿದ ಭಕ್ತಿಭಾವದಲಿ ॥ ೧೫

ರನ್ನ ಪಂಪ ಹಂಪೆಯ ಹರಿಹರ
ಜನ್ನ ಕುವರವ್ಯಾಸ ಲಕುಮೀಶ
ಚೆನ್ನ ಶ್ರೀ ಬಸವಣ್ಣ ಕನಕ ಪುರಂದರಾದಿವರ ।
ಕನ್ನಡದ ಕವಿಕೋಟಿ ಮುಖ್ಯರ
ನಿನ್ನು ಸ್ಮರಿಸುತ ರಾಘವಾಂಕನ
ಕನ್ನಡಾಂಬೆಯ ಪದದೊಳೆರಗುವೆನೆನ್ನ ಹರಸೆಂದು ॥ ೧೬

ರಾಮನಾಮೋಚ್ಚಾರಣೆಯ ಫಲ
ಕಾಮಧೇನುವಿನೊಲುಮೆಯಾ ಫಲ
ಭೂಮಿ ಭೂಸುರಗಿತ್ತ ಫಲ ಜಾಹ್ನವಿಯ ಸ್ನಾನ ಫಲ ।
ನೇಮದಿಂ ನಡೆವರಿಗೆ ಸ್ವರ್ಗದ
ಕಾಮಿನೀ ಜನರಪ್ಪುಗೆಯ ಫಲ
ಪ್ರೇಮದಿಂದೀವೆಂಕಟೇಶ್ವರ ಚರಿತೆ ಕೇಳ್ದರಿಗೆ ॥ ೧೭

ಹರಿಯೆ ವೈರಿಯ ಸುತನು ಕರೆಯಲು
ಕರುಣಿಸುತ ಕಲಿಗಾಯ್ದಯಲ್ಲದೆ
ಮೊರೆದ ಕರಿಯನು ಪೊರೆದೆ ತರಳೆಯ ಕೊರಗ ಮಾಣಿಸಿದೆ ।
ನರನ ಕೊರಳಿನ ಉರಗ ಶರವನು
ಗುರಿಯ ಜಾರಿಸಿ ಪೊರೆದೆಯೈವರ
ದುರಿತ ದೂರನೆ ಚರಣದಲಿ ಶ್ರೀರಂಗನನು ಪೊರೆಯೊ ॥ ೧೮

ಧರೆಯ ಬಹಳವತಾರದಲಿ ಶ್ರೀ
ಹರಿಯ ಮಹಿಮೆಯ ಚರಿತೆಯಲಿ ನಿಜ
ಕರವಿಡಲು ನಾನರ್ಹನೆಂಬುದಕಲ್ಲ ಬರಹವಿದು ।
ಬರಿಯ ಹಸ್ತದಿ ಹಿಡಿದ ಲೇಖಣಿ
ಹರಿಸಿದಾತನನರಿತರಾತನೆ
ಹರಿಯ ಭಕ್ತರ ಶ್ರೇಣಿಗೊಪ್ಪುವ ಶ್ರೇಷ್ಠ ನೀ ಜಗದಿ ॥ ೧೯

ಮೊದಲು ಕವಿತಾಬಾಲ ಸಂಭವಿ
ಸಿದುದು ಯನ್ನಣ್ಣನಿಗೆ ವಂಶದಿ
ಮುದದಿ ತವಮನಕರಗಿ ಬೇಡುತಲಿಷ್ಟಸಿದ್ಧಿಯನು ।
ಮದನಪಿತ ಚಾರಿತ್ರ ಶ್ರವಣದೊ
ಳಧಿಕ ಕಾಲವ ಕಳೆದ ತಂದೆಯ
ಹದದೊಳರ್ಪಿಸಿ ಕೃತಿಯನಾ ಕೃತಕೃತ್ಯತೆಯ ಪಡೆವೆ ॥ ೨೦

ಪ್ರೀತಿಯಿಂಬಗ್ಗಳಿಕೆಯಲಿ ನಿಜ
ಮಾತೆಯನ್ನನು ಪೋಷಿಸಿದ ಸಂ
ಪ್ರೀತಿಗೊಪ್ಪುವೆನಾದರೀಕೃತಿ ಸಾಕ್ಷಿಯಾಗಿರಲಿ ।
ಭೂತಳದಿಯನ್ನಮ್ಮನಿಗೆ ಸಂ
ಕೇತ ಶ್ರೀಮದ್ ವೆಂಕಟೇಶ್ವರ
ನಾಥನೊಲುಮೆಯಕೃತಿಯುಮಾತೆಯುಪಮಿತವಂದಿರಕೆ ॥ ೨೦

ಬರೆಯಲನುವಾದೆನ್ನ ಕರದಲಿ
ಬರೆದೆ ನಾಮಾವಳಿಯನೇಕವ
ಹರಿಯು ತೋರಿದ ಮನದ ಮಾರ್ಗದಲವನ ಚರಿತೆಯನು ।
ಸುರನರೋರಗರೆಲ್ಲರಿಗೆ ದಿನ
ಚರಿಯ ಪಾಲಕ ಚಕ್ರಪಾಣಿಯೆ
ಕರುಣಿಸೈ ಸದ್ಭಾವ ಪರ್ಯಾಯ ನಿನ್ನ ಕಿಂಕರಗೆ ॥ ೨೨

ಕನ್ನಡವು ಬಹುಸವಿಯು ಜಿಹ್ವೆಗೆ
ಕನ್ನಡದ ಸವಿ ಮಧುರ ಕರ್ಣಕೆ
ಕನ್ನಡವು ಸುಶ್ರೇಷ್ಠ ಸಂಸ್ಕೃತಿ ಸಾರಸರಸತಿಗೆ ।
ಕನ್ನಡವು ಬಹುಪುಣ್ಯ ನಾಡಿಗೆ
ಕನ್ನಡದ ಲಿಪಿ ಸರಳ ಬರಹಕೆ
ಕನ್ನಡವೆ ಕವಿಶ್ರೇಷ್ಠಜನ ಸಾಹಿತ್ಯ ಸತ್ಕಥೆಗೆ ॥ ೨೩

ರಚನೆಯಿದು ಶ್ರೀ ವೆಂಕಟೇಶ್ವರ
ನುಚಿತ ಪ್ರೇರಣೆಯಲ್ಲದೆನ್ನಯ
ವಚನ ಕಳವಲ್ಲವನ ನಾಮಾವಳಿಯ ಸಂಕಲನ ।
ಅಚಲ ಭಕ್ತಿಯ ಭಾವನೆಗೆ ಸಂ
ಕುಚಿತ ಧೋರಣೆ ರಹಿತ ಮನ್ನಣೆ
ಯುಚಿತದಾಶೀರ್ವಾದಕರ್ಥಿಸಿ ಮಣಿವೆ ಸಜ್ಜನಕೆ ॥ ೨೪

ಬಡವನನು ಕಡುಲೋಭಿ ಹಳಿದರೆ
ಉಡುಪತಿಯ ನಿಶೆಗಳ್ಳ ದೂಷಿಸೆ
ನಡೆವ ದಿನಮಣಿಗಡುವ ನಿಂದಿಸಲೇನು ಫಲವಹುದು ।
ಜಡಮತಿಗಳಿದನೇನನರಿವರು
ಒಡೆಯ ಶ್ರೀಮದ್ವೆಂಕಟೇಶನ
ನುಡಿಯ ಕೇಳಿದರೆಲ್ಲ ಜನಗಳ ಪಾಪ ಕಳೆವುದನು ॥ ೨೫

ಆದಿಮೂರುತಿ ಸತಿಯ ಸೋದರ
ನಾದವನ ಧರಿಸಿದನ ವೈರಿಯ
ಸೋದರಾತ್ಮಜಸುತನ ಸುತನ ಸಹೋದರನ ಸತಿಯ ।
ನಾದಿನಿಯ ಸುತನಯ್ಯನಾಸುತ
ನಾದವನ ಸುತನಿಂದ ಸೇನಾ
ಸಾಧನವ ನಡೆಸುತಲಿ ವೈರಿಯುಗೆಲಿದ ರಾಘವನೆ ॥ ೨೬

ಸೃಷ್ಟಿಯೊಳಗೀ ಭಾರತಾಖ್ಯ ಬಹು
ಶ್ರೇಷ್ಠ ಮುನಿಗಳ ತಪಕೆ ಪೆಸರಂ
ದಷ್ಟದಿಕ್ಕಿಗೆ ಸಾರುತಿದೆ ನಿಜಸಂಸ್ಕೃತಿಯ ಸವಿಯ ।
ಅಷ್ಟವಿಧದಲಿ ಭುವಿಗೆ ಸಿರಿಸಂ
ತುಷ್ಟದಾಯಕ ರಾಷ್ಟ್ರ ತಪಸಿಗ
ಳಿಷ್ಟಸಿದ್ಧಿಗೆ ಸಾಧ್ಯವೆಂಬುದು ನಿತ್ಯಸತ್ಯವಿದು ॥ ೨೭

ಜಪತಪಾದಿಯ ಫಲಕೆ ನೈಮಿಷ
ವಿಪಿನವಧಿಕ ಪವಿತ್ರವದರೊಳು
ತಪಸಿ ಸನಕಾದಿಗಳಗೊಂದಿನ ಸೂತಮುನಿಶ್ರೇಷ್ಠ ।
ವಿಪುಲ ಪುಣ್ಯಪುರಾಣ ಕಥೆಗಳ
ವಿಪರೀತಾರ್ಥವ ಪೇಳುತಿರಲಾ
ತಪಸಿಗಳು ಭಕ್ತಿಯೊಳು ಕೇಳುತ ನುಡಿದರಿಂತೆಂದು ॥ ೨೮

ಸೂತ ಪೌರಾಣಿಕರ ತಮ್ಮಯ
ಮಾತಿನಲಿ ಶ್ರೀ ವೆಂಕಟೇಶ್ವರ
ಭೂತಳದಿ ನೆಲೆಗೊಂಡ ಚರಿತೆಯ ಹೇಳಬೇಕೆನಲು ।
ಸೂತ ಬಹು ಸಂತೋಷದಲಿ ಮುನಿ
ಜಾತರಿಗೆ ಶ್ರೀ ವೆಂಕಟೇಶ್ವರ
ಪ್ರೀತಿಯಿಂ ನೆಲೆಗೊಂಡ ಚರಿತೆಯ ಹೇಳ್ದನೀತೆರದಿ ॥ ೨೯

ಮುನಿವರರೆ ಭೂಮಂಡಲದ ಬಹು
ಜನರನುದ್ಧರಿಸಲ್ಕೆ ವಿಷ್ಣುವು
ಜನಿಸಿದನು ಶ್ರೀ ವೆಂಕಟೇಶ್ವರ ಶ್ರೇಷ್ಠ ನಾಮದಲಿ ।
ಅನುದಿನವು ಪ್ರತ್ಯಕ್ಷ ದೈವವು
ಮನುಮುನಿಗೆ ಕಲಿಯುಗದಿ ಭಕ್ತರ
ಮನಸಿನಿಷ್ಟಾರ್ಥಗಳ ಸಿದ್ಧಿಗೆ ವೆಂಕಟೇಶ್ವರನು ॥ ೩೦

ನೀವು ಬಯಸಿದ ಚರಿತೆಯಿದು ನಿಜ
ದೇವ ಕಥೆಯಿದ ಭಕ್ತಿಭಾವ ದೊ
ಳಾವ ಕೇಳ್ದರು ಕಳೆವುದಾತನ ಪಾಪ ಫಲವೆಂದು ।
ದೇವ ವೇದವ್ಯಾಸ ಗುರುವನು
ಭಾವ ಶುದ್ಧಿಯೊಳಂದು ಧ್ಯಾನಿಸೆ
ಶ್ರೀ ವರನ ಚಾರಿತ್ರ್ಯ ಫಲಿಸಿತು ಸೂತ ಮುನಿಮನಕೆ ॥ ೩೧

ಈ ಪರಿಯ ನಿಜ ಭಕ್ತಿಭಾವ ದೊ
ಳಾ ಪರಾತ್ಪರ ಮೂರ್ತಿ ಚರಿತೆಯ
ತಾಪಸೋತ್ತಮ ಶುಕರು ಶೌನಕಮುಖ್ಯ ಮುನಿಗಳಿಗೆ ।
ಶ್ರೀ ಪತಿಯು ಶ್ರೀ ವೆಂಕಟೇಶನ
ರೂಪದಿಂದವತರಿಸಿ ಭಕ್ತರ
ತಾಪಗಳೆಯುವನೆಂದು ಸೂತರು ಹೇಳ್ದರೀ ಕಥೆಯ ॥ ೩೨

ಒಂದು ದಿನ ಮುನಿ ಶ್ರೇಷ್ಠ ಕಶ್ಯಪ
ನೊಂದುಗೂಡಲು ಸಪ್ತಮುನಿವರ
ರಂದು ಬೆಳಗಿದರೆಲ್ಲ ತಮ್ಮಯ ಕುಶಲ ವಾರ್ತೆಗಳ ।
ಚಂದದಿಂದವರೆಲ್ಲ ಲೋಕಾ
ನಂದ ಕಲ್ಯಾಣಾರ್ಥ ಸಾಧನೆ
ಗೊಂದು ಯಜ್ಞವ ನಡೆಸಬೇಕೆಂದಲ್ಲಿ ನಿಶ್ಚಯಿಸಿ ॥ ೩೩

ಹರಿಯ ಚರಣೋದ್ಭವೆಯ ತೀರವೆ
ಪರಮ ಪಾವನವೆಂದು ಯಜ್ಞಕೆ
ಕರೆದರಲ್ಲಿಗೆ ನಾರದಾದಿ ಮಹರ್ಷಿಗಳನೆಲ್ಲ ।
ತರಿಸಿ ಸಪ್ತರ್ಷಿಗಳು ಯಾಗಕೆ
ಅರಣಿ ಸಾಮಗ್ರಿಗಳನೆಲ್ಲವ
ತ್ವರಿತದಿಂ ಶುಭಲಗ್ನ ಬರುವುದ ಕಾಯುತಲ್ಲಿರಲು ॥ ೩೪

ಲೋಕ ಲೋಕದನೇಕ ಮುನಿಕುಲ
ದೇಕ ಚಿತ್ತವ ಕಲಕಿ ನಾರದ
ಬೇಕು ಸಮಯವಿದೆಂದು ಚಿತ್ತದನೊಂದು ತಂತ್ರವನು ।
ಲೋಕ ಕಲ್ಯಾಣಾರ್ಥ ಕ್ರತುವಿದು
ಸಾಕು ಯಜ್ಞಾರ್ಜಿತದ ಫಲಕೊಡ
ಬೇಕದಾರಿಗೆ ಪುಣ್ಯ ಪುರುಷನ ಹೇಳಿ ನೀವೆಂದ ॥ ೩೫

ಅಹುದು ನಾವಿದ ನರಿಯದೋದವು
ಬಹು ಮತಿಗಳಿದ್ದೇನು ಯಜ್ಞದ
ಮಹಿಮೆಯಿದಕೊಪ್ಪುವರದಾರವರೆಂದು ಚಿಂತಿಸುತ ।
ಬಹಳ ವಿಧದಾಲೋಚನೆಗೆ ನಿಜ
ಮಹಿಮನನು ಮನಗಾಣದೆಲ್ಲರು
ಸಹಜದಲಿ ನಾರದನ ಬೇಡಿದರಿದಕೆ ಸೂಚನೆಯ ॥ ೩೬

ಸೃಷ್ಟಿಜನು ಕಮಲಜನು ಭರ್ತನ
ಮುಷ್ಟಿ ಕಾಳಗ ಮಲ್ಲ ಶಂಕರ
ಶ್ರೇಷ್ಠರೀ ತ್ರಿಮೂರ್ತಿಗಳು ಸರ್ವಾಗ್ರ ಪೂಜ್ಯತೆಗೆ ।
ಇಷ್ಟ ಯಾಗಾರ್ಜಿತದ ಫಲದಾ
ಭೀಷ್ಟವನು ನಾವಿವರೊಳೊಬ್ಬಗೆ
ಶ್ರೇಷ್ಠದಿಂದರ್ಪಿಸಲು ತಕ್ಕವನಾರು ಮೂವರೊಳು ॥ ೩೭

ಎಂದು ನಾರದ ನುಡಿಯೆ ಮುನಿಕುಲ
ವೃಂದಮೌನವ ತಳೆದು ನೀ ನಮ
ಗಿಂದು ಮೂವರೊಳಧಿಕ ಸಾತ್ವಿಕನಾರು ಪೇಳೆನಲು ।
ಸಿಂಧುವಿದು ತಾ ಭೃಗು ಮಹರ್ಷಿಗೆ
ಮುಂದೆ ಹೇಳುವುದೇನು ನಮಗಿವ
ರಿಂದ ತಿಳಿಯುವುದಲ್ಲವೆಂದನು ಸಭೆಗೆ ನಾರದನು ॥ ೩೮

ಕೇಳಿ ಹಿಗ್ಗಿದ ಭೃಗುವು ತನಗೀ
ರೇಳು ಲೋಕದೊಳಾರು ತಪಸಿನ
ಹ್ವಾಲಗಿದಿರಿಲ್ಲೆನುತ ಗಡ್ಡವ ತೀವಿ ನಡೆದೆದ್ದು ।
ಶೂಲಿಯನು ಕೈಲಾಸದಲಿ ಶ್ರೀ
ಲೋಲನನು ವೈಕುಂಠದಲಿ ಗುಣ
ಶೀಲ ಬ್ರಹ್ಮನ ಸತ್ಯಲೋಕದಿ ಪರಿಕಿಸುವೆನೆಂದ ॥ ೩೯

ಮತಿವಿರಳ ತಾವಾಗಿ ಮುನಿವರ
ಯತಿಜನರ ಸಮ್ಮುಖದಿ ನಿಜ ಸ
ದ್ಗತಿಗೆ ಕಾರಣರಾದ ತ್ರಿಮೂರ್ತಿಗಳು ಮೂವರಲಿ ।
ಅತುಳ ತಾಮಸ ಸತ್ವ ಚರಿತಾ
ಮೃತದ ಸಾತ್ವಿಕನೋರ್ವನಾರೆಂ
ದತಿ ಮಹತ್ವವ ತಿಳಿಯಲೇ ಬೇಕೆಂದು ಪೇಳಿದನು ॥ ೪೦

ಜೀವಿಯಾಗಲಿ ಮೋಕ್ಷ ಸತ್ವ ಪ್ರ
ಭಾವಿಯಾಗಲಿ ದೈತ್ಯನಾಗಲಿ
ಜೀವಕೋಟಿಗಳೊಡೆಯನಾಗಲಿ ತಪಸಿಯಾಗಿರಲಿ ।
ದೇವನಾಗಲಿ ಪರರ ಸತ್ವ ಪ್ರ
ಭಾವದಳತೆಯನರಿಯಲೋದವ
ನಾವನಾದರು ತನ್ನ ಸತ್ವವ ತೆರದೆ ವಿಧಿಯಿಲ್ಲ ॥ ೪೧

ನಿಗಮಗೋಚರ ಮೂರ್ತಿಗಳು ಮೂ
ಜಗಕೆ ಕಾರಣರೆಂಬುದರಿಯದೆ
ಬಿಗಿದ ಸೊಕ್ಕಿನೊಳವರ ಪರಿಕಿಸಲೊರಟನಾ ಮುನಿಯು ।
ಬಗೆಯ ಕಾಣದೆ ಮುಂದೆ ಮುನಿಗಳು
ಜಗಕೆ ಶ್ರೇಷ್ಠನ ತಿಳಿವ ತವಕ ದೊ
ಳಗಣಿತದ ಸಂಖ್ಯೆಯಲಿ ಕಾಯುತ ಕುಳಿತರಲ್ಲದಕೆ ॥ ೪೨

ಭೂಮಿಯಲಿ ಶ್ರೀ ವೆಂಕಟೇಶ್ವರ
ಸ್ವಾಮಿಯವತಾರಕ್ಕೆ ಕಾರಣ
ಸಾಮದಲಿ ಮುನಿಪೋತ್ತಮರು ಕೈಗೊಂಡ ಯಜ್ಞವಿದು ।
ರಾಮನಾಮದ ಶ್ರೇಷ್ಠತೆಗೆ ಸರಿ
ಧಾಮವಾಯಿತು ಜಗಕೆ ತಿರುಪತಿ
ನೇಮದಲಿ ಸಚಿವರ್ಗ ನಿತ್ಯದ ಬಾಳ ಬದುಕಿನಲಿ ॥ ೪೩

ಚಿತ್ತ ಕಂಟಕನಾಗಿ ಮುನಿವರ
ಸುತ್ತಿ ಸಕಲೋಕಗಳ ಕಡೆಯಲಿ
ಹತ್ತಿದನು ಪದ್ಮಾಸನನ ಪುರಕನತಿಕಾಲದಲಿ ।
ನೆತ್ತಿಯಲಿ ಬಿಸಿಯೇರಿ ತಪಸಿನ
ಚಿತ್ತವಗ್ಗಳಿಕೆಯಲಿ ತಾಪಸ
ಮತ್ತನಾದನು ಬೊಮ್ಮನರಮನೆಗೈದ ನಾನೆಂದು ॥ ೪೪

ಅಜನು ಕಮಲಾಸನದಿ ತನ್ನಯ
ನಿಜರಮಣಿಯೊಡಗೂಡಿ ಮುದನನ
ವಿಜಯ ಕೇಳಿಯೊಳರಿಯದಾದನು ಮುನಿಪನಾಗಮವ ।
ಸುಜನ ಕೋಟಿಯನೇಕ ಲೋಕವ
ಸೃಜಿಸಿದವನೆಂದೆಂಬ ಗರ್ವದ
ಕುಜನ ಮತಿಯೀ ಬೊಮ್ಮನೆಂದಾ ಮುನಿಪ ಕೋಪದಲಿ ॥ ೪೫

ಸಲ್ಲ ದೀತನ ಪೂಜೆಯೆಂದವ
ನಲ್ಲಿ ಶಪಿಸಿದ ಬ್ರಹ್ಮ ದೇವನ
ನಲ್ಲಿ ಭಜಿಸಿದರಲ್ಲಿ ತೊಡರಲಿ ಪಾಪ ಫಲವೆಂದು ।
ನಿಲ್ಲದಲ್ಲಿಂ ಹೊರಟ ಮುನಿಗಳ
ಮಲ್ಲ ಭೃಗು ಬಲು ರೋಷದಲಿ ಜಗ
ವೆಲ್ಲ ತಲ್ಲಣವಾಯ್ತು ಕಮಲೋದ್ಭವನ ಚಿಂತೆಯಲಿ ॥ ೪೬

ಸಾರಿದನು ಕೈಲಾಸವನು ಮುನಿ
ಸೇರಿದನು ಸರ್ವೇಶ್ವರೇಶ್ವರ
ಮಾರವೈರಿ ಮಹೇಶ ಚಂದ್ರಮೌಳಿ ಮಂದಿರಕೆ ।
ಸಾರಮಯ ಭಂಗಿಯಲಿ ನಾಟ್ಯದ
ನಾರಿ ಗಿರಿಜೆಯೊಳಾಡುತಿರ್ದನು
ಮೂರು ಲೋಕವ ಮರೆತು ಶಂಕರ ಮುನಿಯನೀಕ್ಷಿಸದೆ ॥ ೪೭

ಲಿಂಗಮಯ ಸರ್ವಾಂಗ ನೀ ಶಿವ
ಲಿಂಗ ಕೇಳಿಯೊಳೆನ್ನ ಮರೆತಿಹ
ಲಿಂಗವೇ ಪೂಜಾರ್ಹವಾಗಲಿ ಶಿವನ ಭಕ್ತರಿಗೆ ।
ಅಂಗಹಾರಿಯ ನಿಂತು ಶಪಿಸಿದ
ಭಂಗಿಯಲಿ ಮುನಿನಡೆದನಲ್ಲಿಂ
ದಂಗಜನಪಿತನೆಡೆಗೆ ವೈಕುಂಠಕ್ಕೆ ಮೋದದಲಿ ॥ ೪೮

ಲೋಕದಗ್ಗಳಿಕೆಯೊಳಗಾವ ಹರ
ರೇಕ ಶ್ರೇಷ್ಠರೊಳಾಣೆ ಮನದ ವಿ
ವೇಕ ಶೂನ್ಯಮಹಾವಿಲಾಸಿಗಳೆಂದನಾ ಮುನಿಪ ।
ಕಾಕುಮತಿಗಳ ತೆರದಲೀ ತ್ರೈ
ಲೋಕ ಪಾವನ ಮೂರ್ತಿಗಳು ಬಲು
ಮೂಕರಾಗಿಹರೆಮ್ಮ ತಪಸಿನ ಬಲವನರಿಯದಲೆ ॥ ೧೯

ಶೇಷತಲ್ಪ ವಿಲಾಸಿಯೆಂದು ವಿ
ಶೇಷ ಭಂಗಿಯೊಳಿದ್ದ ಲಕ್ಷ್ಮೀ
ಭೂಷಣನ ಮುನಿನೋಡಿದನು ವೈಕುಂಠದ್ವಾರದಲಿ ।
ದೋಷ ಕಂಟಕನನ್ನ ಕಾಣದ
ವೇಷದರಿತಿಹನೆಂದು ಭಾಷಿಸಿ
ರೋಷವೇರಿದ ಭೃಗುವು ತಾಪಸ ಬಲುಹುವೆಗ್ಗಳಿಸಿ ॥ ೨೦

ಮದನ ಪಿತನೀ ಮುನಿಯು ತನ್ನಯ
ಸದನ ಕೈದುದನರಿಯದಲೆ ತಾ
ಮದವಡರಿ ಸ್ತ್ರೀಲೋಲನಾಗಿಹನೆಂದು ಕಿಡಿಯುಗುಳಿ ।
ಇದುವೆ ಶಾಸ್ತ್ರಿಯಿದೆಂದು ಮುನಿವರ
ನೊದೆಯೆ ಶ್ರೀ ಹರಿಯೆದೆಗೆ ಕಾಲಲಿ
ಬೆದರಿ ತಾ ವೈಕುಂಠ ಮೂಜಗದೊಡೆಯನಚ್ಚರಿಗೆ ॥ ೨೧

ಕೊಟ್ಟ ವರಗಳಕಾರಣವು ಮುನಿ
ಸಿಟ್ಟಿಗೆಂದಸುರಾರಿ ಕೋಪವ
ಬಿಟ್ಟು ಪಿಡಿದನು ಮುನಿಯ ಪಾದವ ವಿನಯ ಭಕ್ತಿಯಲಿ ।
ಸುಟ್ಟು ಮೂಲೋಕವನು ಕಳೆಯುವ
ಗಟ್ಟಿ ತಾಪಸಿಯೆಂದು ಚರಣದೊ
ಳಿಟ್ಟು ಹಸ್ತವನೊತ್ತುತಿರ್ದನು ಮುನಿಯ ಪಾದವನು ॥ ೨೨

ಹಸ್ತವಿದು ವರವರದ ಪಾವನ
ಹಸ್ತವಿದು ಸರ್ವೇಷ್ಟದಾಯಕ
ಹಸ್ತವಿದು ತ್ರೈಲೋಕ್ಯ ಜೀವಾಧಾರ ಸೃಷ್ಟಿಮಯ ।
ಹಸ್ತವಿದು ಬಹುದೈತ್ಯಮರ್ಧನ
ಹಸ್ತವಿದು ಮೌನಿಕುಲ ವರ್ಧನ
ಹಸ್ತವಿದು ಮುನಿಪಾದವೊತ್ತಿದ ಚೋದ್ಯವೆಂತಿಹುದೊ ॥ ೫೩

ಪಕ್ಷಿವಾಹನ ವಿನಯದಲಿ ನೀ
ರಕ್ಷಿಸಲುಬೇಕೆಂದು ಮುನಿಯನು
ಕುಕ್ಷಿಯೊಳು ಪಿಡಿಗಿಲಾರು ನಿಮಗೆಂದವನಬೇಡುತಿರೆ ।
ತಕ್ಷಣದಿ ತಾನದ್ದು ತಾಪದೊ
ಳಕ್ಷಿಯಲಿ ಕಣ್ಣೀರ ಸುರಿಸುತ
ವಕ್ಷಸ್ಥಳವಿದು ನನ್ನನೆಲೆಯೆಂದಳಲಿ ಶ್ರೀಲಕ್ಷ್ಮಿ ॥ ೫೪

ದೇವದೇವನೊದೆದ ಕಾಲಿನ
ನೋವ ಕಳೆಯಲು ಮುನಿಯ ಪಾದವ
ನೀವುತಿಹ ನೀ ದೇವ ನನಗಿನ್ನಾರುಗತಿಯೆಂದು ।
ಭಾವಜನ ವರಮಾತೆ ತನ್ನಯ
ಶೀವಿದತಿ ಸಂಕಟದಿ ಸರಿದಳು
ದೇವ ನಿದ್ದೆಡೆಯಿಂದ ಮುಂದಕೆ ವಿವಿಧ ಭಾವದಲಿ ॥ ೫೫

ಮಹಿಯೊಳೆನಗಿಂತಧಿಕ ತಾಪಸ
ಮಹಿಮರಿಲ್ಲೆಂದೆನುತ ಮುನಿವರ
ಬಹಳ ಸೊಕ್ಕಿದ ತನ್ನ ಪಾದದ ನೇತ್ರ ಬಲದಿಂದ ।
ಸಹಿಸಲಾಪರೆ ಮಿಕ್ಕವರಿಗಿದು
ದಹಿಸದೇ ಬಿಡದೆಂದು ಮುರಹರ
ಕುಹಕದಲಿ ಕಿತ್ತೊಗೆದ ಮೆಲ್ಲನೆ ಚರಣದಕ್ಷಿಯನು ॥ ೫೬

ಫಣಿಶಯನ ಪದಗಣ್ಣು ಮೆಲ್ಲನೆ
ನುಣಿಚಲಾ ಮುನಿವರನು ಗರ್ವದಿ
ನೋಡಿದುದಕೆನಗಿಂತ ಪರಿಯಾಯ್ತೆಂದು ಮನದೊಳಗೆ ।
ಕೆಣಕಿ ಚೈಸಿದರಾರು ನಿನ್ನನು
ಗಣಿಸಬೇಡೆಂದೆನ್ನ ತಪ್ಪನು
ಮಣಿದು ಹರಿಚರಣಕ್ಕೆ ತಾಗಿದ ತನ್ನ ಮಂಡೆಯನು ॥ ೫೭

ತೋಯಜೋದ್ಭವ ಜನಕ ನಾ ಮುನಿ
ಕಾಯವನು ಪಿಡಿದೆತ್ತಲಾತನು
ಪಾಯದಲಿ ನೀ ಕಳೆದೆಯೆಂದನು ಸರ್ವಶಕ್ತಿಯನು ।
ದಾಯವರಿಯದ ಬುದ್ಧಿ ಶೂನ್ಯಗೆ
ಮಾಯವರಿಯುವುದೆಂತು ಶ್ರೀ ಹರಿ
ಕಾಯಬೇಕೆಂದವನು ತನ್ನಯ ಬರವ ಬಣ್ಣಿಸಿದ ॥ ೫೮

ಶ್ರೀ ಲತಾಂಗಿಯು ಕೋಪತಾಪ
ಜ್ವಾಲೆಯನು ಮನಗಂಡು ಲಕ್ಷ್ಮೀ
ಲೋಲ ಸಂತೈಸಿದನು ತನ್ನಯ ಪ್ರಾಣವಲ್ಲಭೆಯ ।
ತೋಳ ಕರದಲಿ ಪಿಡಿದು ನಲ್ಲೆಯ
ಮೇಲು ಮುಸುಕನು ತೆಗೆದು ತುಲಸೀ
ಲೋಲ ಪೇಳಿದ ತನ್ನ ನಿತ್ಯದ ವೃತ್ತಿಲೀಲೆಯನು ॥ ೫೯

ಬೇಡಲುಚಿತವ ಮಾಡಿ ಸಲಹುವೆ
ಕಾಡಲವನತಿಗೆಳೆವ ತಾಪಸಿ
ಕೇಡಬಯಸುವನೆಂದು ತಿಳಿದಿರಲಿಲ್ಲ ಮುನ್ನಿನೊಳು ।
ನೋಡಲಿಲ್ಲವೆ ನೀನು ಭೃಗುವಿನ
ಪಾಡದೇನಾಯ್ತೆಂದು ಮಿಕ್ಕದ
ನಾಡಿ ಫಲವಿಲ್ಲೆಂದು ಲಕ್ಷ್ಮಿಯುಗಲ್ಲವನು ಪಿಡಿದ ॥ ೬೦

ಮೂರು ಲೋಕದ ಕರ್ತ ಮುನ್ನಿನ
ಚಾರು ಶೃತಿ ಸಂಪನ್ನ ದೈವ ದೊ
ಳಾರು ಸರಿಸಮರಿಲ್ಲ ನಿಮಗೆಂದಾನು ತಿಳಿದಿದ್ದೆ ।
ಧಾರುಣಿಯ ಮುನಿಯೋರ್ವ ನಿಮ್ಮನು
ಮೀರಿಒದನೆಂದರಿತಮೇಲಿ
ನ್ನ್ಯಾರು ಲೆಕ್ಕಿಸರೆನ್ನ ನಾರಾಯಣನ ಸತಿಯನ್ನ ॥ ೬೧

ಕಂಡೆ ಲಕ್ಷ್ಮೀ ಮನದ ನಿನ್ನ ಪ್ರ
ಚಂಡ ಬೇಸರವನ್ನು ಬಿಡು ಭೂ
ಮಂಡಲಕೆ ಬೇಡೆಮ್ಮ ವಿರಸ ವಿಲಾಸ ಪರಿಣಾಮ ।
ಕಂಡು ಮೂಜಗ ನಗದೆ ನಮ್ಮಯ
ಭಂಡ ಜಗಳವನೆಂದು ಶ್ರೀಹರಿ
ಮಂಡೆಯನು ನೇವರಿಸಿ ನುಡಿದನು ತನ್ನ ನಿಜ ಸತಿಗೆ ॥ ೬೨

ಪೋಗ ಬೇಡೆನ್ನಾಣೆ ಮುಂದಕೆ
ಹೋಗದಿರು ನೀನೆಂದು ಲಕ್ಷ್ಮಿಯ
ಕೂಗಿ ಕೊಳ್ಳುತ ಬಂದು ಮುರಹರ ತಡೆದು ನಿಲ್ಲಿಸುತ ।
ಪೋಗುವುದು ನೀನೆಲ್ಲಿಗೆನ್ನನು
ನೀಗಿ ಕಾಲವ ಕಳೆಯ ಬೇಕೆಂ
ದೀಗ ಮನ ಮಾಡಿರುವೆಯಾ ಬಡ ಮುನಿಯ ದೆಸೆಯಿಂದ ॥ ೬೩

ಅನುದಿನವು ನಾನಿನ್ನ ಜೊತೆಯಲಿ
ತನು ಸುಖಾಬ್ಧಿಯೊಳೀಜುತಿರ್ದುದ
ನೆನೆಯ ಬಾರದೆ ಲಕ್ಷ್ಮಿ ಬಾರೆಂದಳಲಿದನು ದೇವ ।
ಘನತೆಯಿದು ನಿನಗಲ್ಲ ಯನ್ನೊಳು
ಮುನಿಸು ಸಲ್ಲದು ಬೇಡ ನೋಡೆಂ
ದೊನಿತೆಯನು ತಡೆಗಟ್ಟಿ ಪೇಳಿದ ಸಕಲಸಿರಿಯರಸ ॥ ೬೪

ಕೊಟ್ಟ ವರಗಳ ಬಲದ ಗರ್ವದಿ
ದಿಟ್ಟಸದೆ ತ್ರಿಮೂರ್ತಿಗಳ ಪಾಪಿನಿ
ಕೆಟ್ಟನದರಿಂದವನಿಗಾಯಿತು ತಕ್ಕ ಪ್ರತಿಶಿಕ್ಷೆ ।
ಸಿಟ್ಟು ನಿನಗಿದು ತರವೆ ಲಕ್ಷ್ಮೀ
ಬಿಟ್ಟು ಪೋಗದಿರೆನ್ನ ಪಾದದಡಿ
ಯಿಟ್ಟರೆನ್ನಾಣತಿಯಿದೆಂದನು ಲಕ್ಷ್ಮಿನಾರಯಣ ॥ ೬೫

ಕುಕ್ಷಿಯೊಳು ಜನರೆಲ್ಲ ನನ್ನನು
ರಕ್ಷಿಸನುದಿನ ಲಕ್ಷ್ಮಿನರಯಣ
ದಕ್ಷನೆನ್ನುವ ಎನ್ನ ನಾಮದ ಮುನ್ನ ನೀನಿರುವೆ ।
ಪಕ್ಷಿವಾಹನೆ ನಿನ್ನ ಮನಸಿನ
ಲಕ್ಷಣವು ಮತಿಗೇಡಿತನ ಬಿಡು
ಯಕ್ಷ ರಾಕ್ಷಸರಿದಕೆ ನಗುವರು ಪೋಗಬೇಡೆಂದ ॥ ೬೬

ಭೃಗುವು ಶಾಪಿಸಿಯೋರ್ವ ನೀ ತ್ರೈ
ಜಗದ ಪಾಲನೊದ್ದನೆಂದರೆ
ನಗುವುದಲ್ಲದೆ ಮುಂದೆ ಗಣಿಸುವರಾರು ನಿಮ್ಮಗಳ ।
ಹೊಗುವೆ ಭೂಲೋಕವನು ತಪಸಿಗೆ
ಸಿಗುವುದಲ್ಲಿಯೆ ಶಾಂತಿ ಮನಸಿಗೆ
ನಿಗಮಗೋಚರ ತಡೆಯಬೇಡೆಂದೊರಟಳಾಲಕ್ಷ್ಮಿ ॥ ೬೭

ಪಂಕಜೋದ್ಭವ ಮಾತೆ ಸುರನುತೆ
ಸಂಕಟಾಂತ್ಯ ಪುನೀತೆ ಭಕ್ತರ
ಶಂಕ ವರ ಪ್ರಖ್ಯಾತೆ ಬಂದಳು ಧರೆಗೆ ಸಿರಿಯಾಗಿ ।
ಬಿಂಕದರಸಿಯನಗಲಿದಾ ಬಲು
ಸಂಕಟದಿ ವೈಕುಂಠವಾಸನು
ಮಂಕನಾದನು ಸತಿವಿಯೋಗದ ಬಹಳ ಬೇಗೆಯಲಿ ॥ ೬೮

ಸಿರಿವನಿತೆ ವೈಕುಂಠದಿಂದೊರ
ಹೊರಡಲಾ ಸಿರಿಯರಸ ತನ್ನಯ
ಪುರವನೀಕ್ಷಿಸಲಲ್ಲಿ ಕಾಂತಿಯು ಸುಳಿವು ಸೊಂಕದಿರೆ ।
ಧರಣಿ ದೇವಿಯುನರಸಿ ಹೋದಳು
ಸಿರಿಯು ನಾನಿನ್ನಿರುವುದನುಚಿತ
ಪುರದ ಕ್ಷೋಭೆಯೊಳೆಂದು ಮುರಹರಮುಕ್ತಿಯುಗಳಿಗೆಟ್ಟು ॥ ೧೯

ಕೂಗಿದನು ಶ್ರೀಹರಿಯು ಲಕ್ಷ್ಮೀ
ಬೇಗ ಬಂದಾಲಂಗಿಸೆನ್ನನು
ಸಾಗರೋದ್ಭವೆ ಮದನ ಮಾತೆಯೆ ಮನವ ತಣಿಸೆಂದು ।
ಬೇಗೆಯುರಿದ ಮನದಿ ದೇವನು
ಸಾಗಿದನು ಸಂಗಾತಿಗೋಸುಗ
ನೀಗಿ ಸಿರಿ ವೈಕುಂಠಪುರವನು ಲಕ್ಷ್ಮೀನಾರಯಣ ॥ ೨೦

ಚಿತ್ತ ಚೆದುರಿದ ಬಟ್ಟೆಯಲಿ ಮನ
ಮುತ್ತಿದರೆ ತವಕದಲಿ ಲಕ್ಷ್ಮಿಯ
ಮತ್ತೆ ಕೂಡದದೆಂತು ಕಾಲವ ಕಳೆಯಬೇಕೆಂದು ।
ಸುತ್ತಿ ತನುದಂಡಾಗಿ ಹುಡುವೆಯು
ಚಿತ್ರವೆಗ್ಗಳಿಕೆಯಲಿ ಶ್ರೀಹರಿ
ಇತ್ತ ಭೂಲೋಕಕ್ಕೆ ಬಂದನು ಸತಿಯ ಪ್ರತಿಯಾಗಿ ॥ ೨೧

ದೇವ ಬಂದನು ಭಕ್ತಕೋಟಿ ಪ್ರ
ಭಾವ ಬಂದನು ದೀನ ಜನರು
ಜ್ಜೀವ ಬಂದನು ನೆನೆವ ಮನಸಿನ ಕಲ್ಪತರುವಾಗಿ ।
ಭಾವನೆಗೆ ಸಂಕಲ್ಪ ಬಂದನು
ನೋವಿಗರ ಸಂತುಷ್ಟ ಬಂದನು
ಕೋವಿದರ ಮೈಸಿರಿಗೆ ಶ್ರೀಹರಿ ಬಂದ ಭೂತಳಕೆ ॥ ೨೨

ಕ್ಷೀರಸಾಗರ ಶಯನ ಬಂದನು
ನೀರಿನೊಳುದ್ಭವೆಯರಸ ಬಂದನು
ಚಾರು ವೇದೋದ್ಧಾರ ಬಂದನು ಕಲ್ಪತರುವಾಗಿ ।
ಘೋರ ದೈತ್ಯ ವಿರಾಮ ಬಂದನು
ಸಾರಮಯ ಸತ್ಕೀರ್ತಿ ಬಂದನು
ಧಾರುಣೀಪತಿ ಬಂದ ಕನ್ಯೆಯ ರಮಣಿಯಾದರಿಂ ॥ ೭೩

ಪಕ್ಷಿವಾಹನ ಬಂದ ಭಕ್ತರ
ರಕ್ಷಿಸುವ ದೊರೆ ಬಂದ ಸರ್ವರ
ಕುಕ್ಷಿಬಾಧೆಯ ನೀಗಿಸುವ ಸಂರಕ್ಷಕನು ಬಂದ ।
ಯಕ್ಷಿಣೀ ಜನ ಲಕ್ಷ್ಯ ಬಂದನು
ಕುಕ್ಷಿಯೊಳುಧರ ಬಂದ ಧರೆಯಲಿ
ಲಕ್ಷಲಕ್ಷಾಧಿಕ್ಯ ಭಕ್ತರ ಮೋಕ್ಷವರ ಬಂದ ॥ ೭೪

ಸ್ವಾಮಿ ಬಂದನು ನೆನೆವ ಜನ ನಿ
ಸ್ಸೀಮ ಬಂದನು ಸುಜನ ಕೋಟಿ ಸು
ನಾಮ ಬಂದನು ದುರ್ಜನರ ಕಲಿಭೀಮ ತಾ ಬಂದ ।
ರಾಮನಾಮ ಸುನಾಮ ಬಂದನು
ಧೀಮಧನುಜ ವಿರಾಮ ಬಂದನು
ಭೂಮಿಪತಿ ಶ್ರೀ ವೆಂಕಟಾಚಲಪತಿಯು ತಾ ಬಂದ ॥ ೭೫

ಖಗಚರನು ಧರೆಗಿಳಿದು ಬಂದನು
ಜಗದೊಡೆಯ ಶ್ರೀಧರನು ಬಂದನು
ಯುಗಪುರುಷ ತಾನಾಗಿ ಬಂದನು ಕಲಿಯುಗಾದಿಯಲಿ ।
ಸುಗುಣಗಣ ಸಚ್ಚರಿತ ಬಂದನು
ಹೊಗಳಲಗಣಿತ ನಾಮ ಬಂದನು
ಯುಗಾದರಸ ಕಡು ಚಲುವ ಬಂದನು ಕಲಿಗೆ ಶಿಲೆಯಾಗಿ ॥ ೭೬

ಬಂದ ಭೂಜಗೋವಿಂದ ಪೊರೆಯಲು
ಬಂದ ಭಕ್ತಾದಿಗಳ ಭಜನೆಗೆ
ಬಂದ ನಿತ್ಯಾನಂದ ಮೂರುತಿ ತಿರುಮಲೆಯ ನೆಲೆಗೆ ।
ಬಂದ ಕಲಿಯುಗದಂದ ಕೇಶವ
ಬಂದ ಲಕ್ಷ್ಮೀಲೋಲನರಸುತ
ಬಂದ ಪದ್ಮಾವತಿಗೆ ಪತಿ ತಾನಾಗಿ ಭೂಜಗಕೆ ॥ ೭೭

ಮಂಕು ಜನ ಸಂಕಿರಣ ಬಂದನು
ಶಂಕು ಚಕ್ರ ಕರಾಬ್ಜ ಬಂದನು
ಲಂಕೆಯಸುರ ಧ್ವಂಸಿ ಸುರಕುಲ ವಂತಲತೆ ಬಂದ ।
ಸಂಕಟಾಂಕಿತ ವರದ ಬಂದನು
ಬಿಂಕದರಸಿಯನರಸಿ ಚಿಂತೆಯ
ದಂಕುರಿಸಿ ತಾ ಬಂದ ಚಿನ್ಮಯ ಚಲುವನೀ ಧರೆಗೆ ॥ ೭೮

ಆದಿ ಮೂಲನು ಬಂದ ನಮ್ಮಯ
ವೇದ ಪುರುಷನು ಬಂದ ಭಜಕರ
ಮೇಧಿನೀಪತಿ ಬಂದ ಭಕ್ತರ ಮೊರೆಗೆ ಮನವಿತ್ತು ।
ಸಾಧುಜನ ಸನ್ಮಾನ್ಯ ಬಂದನು
ಸಾಧಿಸಲು ತನ್ನಿಚ್ಛೆಯನು ಸನ
ಕಾದಿ ವಂದಿತ ಬಂದ ಭೂಜನ ಸಿರಿಗೆ ಸದ್ಗತಿಗೆ ॥ ೭೯

ಅಜಪಿತನು ನಡೆನಡೆದು ಮಾರ್ಗದಿ
ನಿಜಸತಿಯ ಕಾಣದಲೆ ತನ್ಮಯ
ಭುಜಬಲವು ಬಹುಬಳಲಿ ಹಸುಬೆಂಡಾದ ಬಟ್ಟೆಯಲಿ ।
ಸುಜನ ಕೋಟಿಯ ನಿತ್ಯ ನಿರ್ಮಲ
ಭಜನೆಯಲಿ ಮೈದುಂಬಿ ಬಂದನು
ನಿಜಗುಣಾನ್ವಿತ ಪರಶುಧಾಮನು ಭೂಮಿಮಂಡಲಕೆ ॥ ೮೦

ತಿರುತಿರುಗಿ ಬೆಂಡಾಗಿ ದೇಹವ
ನೊರಗಿದನು ವಾಲ್ಮೀಕವೊಂದರ
ಪರಿಧಿಯಲಿ ಶ್ರೀ ವೆಂಕಟಾಚಲದಲ್ಲಿ ಮುರಹರನು ।
ಸೊರಗಿ ತನು ಕಣ್ಮುಚ್ಚಿ ಕಷ್ಟನ
ಭರದೊಳಲ್ಲಿಯೆ ಮಾಡಿದನು ಶ್ರೀ
ಹರಿಯು ತನ್ನ ನಿವಾಸವನು ವಾಲ್ಮೀಕ ಮಧ್ಯದಲಿ ॥ ೮೧

ಅನ್ನದಾತನು ಸಕಲ ಜೀವರಿ
ಗನ್ನವಿಲ್ಲದೆ ಬಳಲುವುದು ನಮ
ಗಿನ್ನು ಘನವಿಲ್ಲೆಂದು ಪೇಳಿದ ಬ್ರಹ್ಮ ರುದ್ರನಿಗೆ ।
ಮುನ್ನನಾವಿನ್ನಾವ ಪರಿಯಲಿ
ಸನ್ನುತಾಂಗನ ಸಲಹಬೇಕೆಂ
ದಿನ್ನು ಸೇರಿದರವರು ಲಕ್ಷ್ಮಿಯೊಳ್ಳಿ ಚಿಂತಿಸಲು ॥ ೮೨

ಜೀವ ಕಳೆಗುಂದಿರುವ ನಮ್ಮಯ
ದೇವದೇವನ ಹಸುವೆಯನು ನಾ
ವಾವ ತೆರದಲಿ ನೀಗಬೇಕೆಂದವರು ಮೂವರೊಳು ।
ಶೀವಿದತಿ ಚಿಂತೆಯಲಿ ತನ್ನಯ
ಭಾವನೆಯು ಪೇಳಿದನು ಲಕ್ಷ್ಮೀ
ದೇವಿ ಗೊಲ್ಲತಿಯಾಗಿ ಬರಬೇಕೆಂದು ಶಂಕರನು ॥ ೮೩

ಕಮಲಜನು ಪಶುವಾಗಿ ಶಶಿಧರ
ನಿಮಿಷದಲಿ ಕರುವಾಗೆ ಗೊಲ್ಲತಿ
ಗಮಿಸಿದಳು ವಿಕ್ರಯಿಸಲವುಗಳ ಶಿವನ ನೇಮದಲಿ ।
ಸಮಯವಿಂತಿರೆ ಚಂದ್ರಗಿರಿಯಲಿ
ಭ್ರಮಿಸಿದನು ದೊರೆ ಪಶುವ ಕೊಳ್ಳಲು
ವಿಮಲಮತಿ ಮಾರಿದಳು ಪಶುವನು ಚೋಳರಾಜನಿಗೆ ॥ ೮೪

ಭೂಮಿಪತಿಯಿದನೇನ ಬಲ್ಲನು
ಧೀಮ ತಾನೆಂಬಂತೆ ಕೊಂಡನು
ಸೋಮಧರ ಕಮಲಜರ ಪಾಲ್ಕರೆಯಲ್ಕೆ ಪಶುವೆಂದು ।
ನೇಮಿಸಿದನವ ಗೊಲ್ಲನೊಬ್ಬನ
ಪ್ರೇಮದಿಂ ಸಲಹಲ್ಕೆ ಗೋವನು
ನೇಮದಲಿ ಮೇಯಿಸುತಲಿದ್ದನು ಗೊಲ್ಲನೀ ಪಶುವ ॥ ೨೫

ಹತ್ತಿರದ ಶ್ರೀ ವೆಂಕಟಾಚಲ
ದತ್ತ ಪಶುಗಳ ಬಿಟ್ಟು ಗೋವಳ
ನಿತ್ಯ ಬನದಲಿ ಮೆರೆಯುತಿರ್ದನು ಹಣ್ಣುಹಂಪಲಿಗೆ ।
ಸುತ್ತಿಬಂದೀ ದೇವ ಸುರಭಿಯು
ಹುತ್ತದಲ್ಲಿನ ಹರಿಯ ಬಾಯೊಳ
ಗಿತ್ತು ಮೊಲೆಯನು ಹಾಲ ಕುಡಿಸುತಲಿತ್ತು ನಿತ್ಯದಲಿ ॥ ೨೬

ಹಾಲ ಕುಡಿಸುತಲಲ್ಲಿ ಲಕ್ಷ್ಮೀ
ಲೋಲನನು ಸಲಹುತ್ತ ತನ್ನಯ
ಕಾಲವನು ಕಳೆಯುತ್ತಲಿರಲಾ ಪಶುವನೊಂದು ದಿನ ।
ಚೋಳ ಭೂಪನ ಮಡದಿ ಪಶುವನು
ಹಾಲಕೊಡದಿರೆ ನೋಡಿ ಗೊಲ್ಲನ
ಕೇಳಿದಳು ಖತಿಗೊಂಡು ಬನದಲಿ ಹಾಲಕುಡಿವೆಂದು ॥ ೨೭

ಬೆಚ್ಚಿದನು ಮೈಬೆವರಿ ಗೋವಳ
ನಚ್ಚರಿಗೆ ಬೆರಗಾಗಿ ತಪ್ಪಿನ
ಕಿಚ್ಚಿನಲಿ ತಾಳಿಗೆಯು ಕೊಡರಿಂದ ನುಡಿಯೊಳಿಂತೆಂದ ।
ಮೆಚ್ಚ ಬೇಕೌ ತಾಯೆ ನಿಮ್ಮಯ
ನೆಚ್ಚಿಗೆಯ ಭಟ ನಾನು ಹೇಳುವ
ಬಿಚ್ಚು ಮನಸಿನ ಸತ್ಯವಿದು ನಾನರಿಯಲಿಲ್ಲೆಂದ ॥ ೨೮

ಎಲ್ಲ ಹಾಲನು ಕುಡಿದು ಕಾಡಿನೊ
ಳಲ್ಲಿ ಹೇಳುವುದೇನು ನಿನ್ನಯ
ಸುಳ್ಳು ನುಡಿ ಸಾಕೆಂದು ಬೈದಳು ರಾಣಿ ಸೇವಕನ ।
ಪೊಳ್ಳುತನವಿದು ಸಲ್ಲದೈ ಬಿಡು
ಗೊಲ್ಲ ನಿನ್ನಾಯುಷ್ಯಕಂಟಿಮು
ವಲ್ಲಿ ಪೋದರು ಬಿಡೆವು ನಿನ್ನನನೆಂದಳಾ ತರುಣಿ ॥ ೮೯

ಉಂಡು ನಿಮ್ಮನ್ನವನು ಬೆಳೆದಿಹ
ಭಂಡನಲ್ಲೌ ತಾಯೆ ನನ್ನಯ
ಖಂಡಿತವ ಪರಿಕಿಸಲು ಸಮಯವಿದೆನ್ನು ಕಾಚರನು ।
ದಂಡಿಸಲು ಕೊಡಿರೊಂದು ದಿನವನು
ಕಂಡು ಪೇಳುವೆ ಸತ್ಯವೆಂದವ
ಮಂಡೆಯನು ಬಹುಬಾಗಿ ಬೇಡಿದ ರಾಜ ಪತ್ನಿಯನು ॥ ೯೦

ಒಂದೆರಡು ದಿನಗಳಲಿ ನಿಜವನು
ಕಂಡು ಪೇಳುವೆನೆಂದು ಗೋವಳ
ಬಂದನಲ್ಲಿಂದಿತ್ತ ಗೋವಿನ ಬೆಂಬಸರಿಯಲ್ಕೆ ।
ಮುಂದೆ ಪಶುಗಳ ಬಿಟ್ಟು ಬನದಲಿ
ಹಿಂದಿನಿಂದೀ ಪಶುವನೀಕ್ಷಿಸ
ಲೆಂದು ಮೆಲ್ಲನೆ ಸಾಗುತಿರ್ದನು ವಿಪಿನ ಮಧ್ಯದಲಿ ॥ ೯೧

ತಿರುತಿರುಗಿ ತಾ ಬಂದು ಹುತ್ತದ
ಸುರುಳಿನಲಿ ಮೊಲೆಯಿಟ್ಟು ಹಾಲನು
ಸುರಿಸುತಿರ್ದುದ ಕಂಡು ಗೋವಳ ರೋಷವೆಗ್ಗಳಿಸಿ ।
ಸರಿಸಕವನೈತಂದು ತನ್ನಯ
ಕರ ಕಠಾರಿಯನೆತ್ತಿ ಹೊಡೆಯಲು
ಸುರಭಿಯನು ಸಂರಕ್ಷಿಸಿದ ಹರಿಗೆರಗಿತಾಘಾತ ॥ ೯೨

ಹುತ್ತದಲಿ ಹರಿಯಿದ್ದನೆಂಬುದ
ನೆತ್ತಬಲ್ಲನು ಗೊಲ್ಲ ಹರಣವ
ಕೆತ್ತ ಹರಿ ಕುಂಡದಲಿ ನೆತ್ತರು ಸುರಿವುದನು ಕಂಡು ।
ಚಿತ್ತಜನಪಿತಗಾದ ಪರಿಯನು
ಹೊತ್ತು ಮರಳಿದ ಪಶುವು ದುಃಖದಿ
ಬಿತ್ತರಿಸಿತದನೆಲ್ಲ ರಾಜಗೆ ಮೂಕಭಾಷೆಯಲಿ ॥ ೯೩

ಚೋಳರಾಜನ ತಂದು ಲಕ್ಷ್ಮೀ
ಲೋಲನನು ತೋರಿಸಲು ಸುರಭಿಯು
ಜಾಲದಲಿ ತನು ಪುಳಕ ನೋಡುತಲಿದ್ದನೆಲ್ಲವನು ।
ಮೂಲ ಕಾರಣವಿಲ್ಲದಲೆ ಗೋ
ಪಾಲ ಮಡಿದನದೆಂತು ಪರಿಯಿದ
ಬಾಳನೇತ್ರನೆ ಬಲ್ಲನೆಂದವ ಭಯದಿ ಬೆಚ್ಚಿದನು ॥ ೯೪

ಗೊಲ್ಲಗೈದಪರಾಧದಲಿ ನೀ
ನಿಲ್ಲಿ ನಿತ್ಯ ಪಿಶಾಚಿಯಾಗೆಂ
ದಲ್ಲಿ ಶಪಿಸಿದ ಹರಿಯು ರೋಷದೊಳೆದ್ದು ಧರಣಿಪನ ।
ವಲ್ಲೆನಿದನೆಂದೆನದೆ ಚೋಳನು
ಸೊಲ್ಲ ನಡುನಡುಗುತ್ತ ಹರಿಯನು
ಮೆಲ್ಲಮೆಲ್ಲನೆ ಕೇಳ್ದ ಶಾಪ ವಿಮೋಚನೆಯ ದಿನವ ॥ ೯೫

ಚೋಳ ನಿನ್ನಯ ಶಾಪಗಳೆಯಲು
ಚೋಳಕುಲದಾಕಾಶ ರಾಜನ
ಬಾಲೆ ಪದ್ಮಾವತಿಯನೊರಿಸುವ ಕಾಲ ಬರಲೆಂದು ।
ಶೀಲಗುಣಸಂಪನ್ನ ನಿನ್ನಯ
ಕಾಲಕಡರಿದ ಶಾಪಗಳೆವುದು
ಬಾಳುವುದು ನೀನನಿತು ಕಾಲವು ಎನ್ನ ಶಾಪದಲಿ ॥ ೯೬

ಬಿಕೆ ದುಃಖಿಸೆ ರಾಜ ನಾನು ವಿ
ವೇಕಮತಿಯಾಕಾಶರಾಜನಿ
ಗೇಕ ಪುತ್ರಿಕರತ್ನ ಪದ್ಮಾವತಿಯ ಕೂಡುವೆನು ।
ಆಕೆಯೊಡನೆ ವಿವಾಹ ಕಾಲದೊ
ಳಾಕೆಯಯ್ಯನ ಕೊಡುಗೆ ಮಕುಟವು
ಸೋಂಕಲೆನ್ನಯ ಶಿರವ ಕಳೆವುದು ಶಾಪ ನಿನಗೆಂದ ॥ ೯೭

ಅಂದು ನಾನಿನಗೊಲಿಯೆ ನೀನನ
ಗೊಂದು ವಜ್ರಕಿರೀಟ ಕೊಡುಗೆಯ
ತಂದುಕೊಡಲದ ಧರಿಸುವೆನು ನಾ ಶುಕ್ರವಾರದಲಿ ।
ಎಂದ ಸ್ವಾಮಿಯ ಪದಕೆ ಮಣಿಯುತ
ಬಂದನಿತ್ತಲು ಹರಿಯ ಶಾಪದ
ಬಂಧನಬಿಡಲಾ ಚೋಳರಾಜನು ಕಾಲ ಕಳೆಯಲ್ಕೆ ॥ ೯೮

ತಿಳಿದು ಮೂರ್ಛೆಯೊಳಿದ್ದ ಗೋವಳ
ನಳಿನಸಂಭವ ಪಿತನ ಪಾದದಿ
ಮುಳುಗಿ ಮೂರ್ಖನ ತಪ್ಪ ಕ್ಷಮಿಸೆಂದೆರಗಿ ಪದಯುಗಕೆ ।
ಒಲಿದು ಗೊಲ್ಲನ ಕ್ಷಮಿಸಿ ಮುರಹರ
ತಿಳಿಯ ಹೇಳಿದ ಹರಿಯು ಗೊಲ್ಲನ
ಗಳಿಕೆಯಾಯಿತು ಸ್ವಾಮಿದರ್ಶನ ನಿತ್ಯ ಮೊದಲಿನಲಿ ॥ ೯೯

ಹರಿಯು ಗೊಲ್ಲನ ಕುರಿತು ನಿನ್ನಯ
ದರುಶನವು ಮೊದಲಾಯ್ತು ಭೂಮಿಯೊ
ಳಿರುವ ಸರ್ವರಿಗೆಲ್ಲವದರಿಂ ನಿನಗೆ ನಾ ಮೊದಲು ।
ದರುಶನವನೀಯುವೆನು ಮೊದಲಿದ
ನರಿತು ದೇವಾಲಯದ ಬಾಗಿಲ
ತೆರೆದು ಮೊದಲಲಿ ಪಡೆವ ದರುಶನಕರುಹ ನೀನೆಂದ ॥ ೧೦೦

ಇನಿತು ಕಾಲವು ಗೊಲ್ಲನೊಂಕದ
ಕನಯು ಬಾಗಿಲ ತೆರೆಯು ನಿಲಯದ
ದಿನಚರಿಯು ಪ್ರಾರಂಭಿಸುವುದಾ ವೆಂಕಟೇಶನಿಗೆ ।
ಅನುದಿನವು ನಿಜಭಕ್ತಜಂಗುಳಿ
ವನದಿ ಕೊಡಲಿಯೊಳೊಡೆದ ಗೊಲ್ಲನ
ಮನೆತನದ ಮಗನೊಬ್ಬ ಬಾಗಿಲ ತೆರೆಯ ನೋಡುವರು ॥ ೧೦೧

ದೇವದೇವನು ಗೊಲ್ಲನೇಟಿನ
ನೋವಿಗೌಷಧಕಾಗಿ ವನದಲಿ
ತೀವಿದತಿ ಬಳಲಿಕೆಯೊಳೈ ತರುವಲ್ಲಿ ಬೃಹಸ್ಪತಿ ।
ನೋವಗಳೆಯಲು ವೆಂಕಟಾಚಲ
ಕಾವ ಪರಿಯಲಿ ಬಂದನೋ ನಿಜ
ದೈವನಿದ್ದೆಡೆಯರಸಿ ತಕ್ಷಣದೌಪಚಾರದಲಿ ॥ ೧೦೨

ಕಂಡು ಶ್ರೀಹರಿ ಗುರುವನೌಷಧಿ
ಕೊಂಡು ಬಾರೆಂದನೆ ಬೃಹಸ್ಪತಿ
ಮಂಡಲದ ಭವರೋಗ ವೈದ್ಯನಿಗೌಷಧಿಯೆ ಎನುತ ।
ಮಂಡೆಯಲ್ಲಿಯ ಗಾಯಕೌಷದಿ
ಕಂಡೊಡತ್ತಿಯ ಮರದ ಹಾಲನು
ಮಂಡೆಗೊತ್ತಲು ಗಾಯ ಮಾಣುವುದೆಂದನಾ ಗುರುವು ॥ ೧೦೩

ಮೂರು ಲೋಕದ ಜನಕ ಕಾಡಿನ
ದಾರಿಯೊಳು ಹುಡುಕುತ್ತಲಲ್ಲಿಗೆ
ಸಾರುತಿರೆ ಬನದಲ್ಲಿ ಕಂಡನು ಪರ್ಣಶಾಲೆಯನು ।
ಮಾರಟಿತ ಸಂಕೀರ್ತನೆಯುಸಿರಿ
ಮೀರಿದತಿ ಭಕ್ತಿಯಲಿ ಕೇಳಲು
ಸೇರಿ ಹರಿಯು ಕುಟೀರದಲಿ ನನ್ನಮ್ಮನಾರೆನಲು ॥ ೧೦೪

ಈತನವನ್ಯಾ ಎನಲು ಗುಡಿಸಲ
ಮಾತೆ ಬಕುಳಾದೇವಿ ಮಗನನು
ಪ್ರೀತಿಯಲಿ ಕಂಡಂತೆ ಬಂದಳು ಕೇಳುತೀಧ್ವನಿಯ ।
ಈತ ಕೂಗಿದ ಧ್ವನಿಯು ಕೃಷ್ಣನ
ಮಾತಿನಂತಿರಲಲ್ಲಿಗೈತಂ
ದೀತನಾರೆಂದತಿಶಯದಲಾ ಬಕುಳೆ ಕೇಳಿದಳು ॥ ೧೦೫

ಗುರುವು ಹೇಳಿದ ಪರಿಯನೆಲ್ಲವ
ನರುಹಲಾ ನಿಜಮಾತೆಯೌಷಧಿ
ತರಿಸಿ ಕಟ್ಟನು ಕಟ್ಟಿಕೊಟ್ಟಳು ಕುಡಿಯೆ ಸಿಹಿಪಾಲ ।
ಅರಿಯೆ ನೀನಾರೆಂದು ಕೇಳಲು
ಮರೆತೆಯಾ ನಿಜಮಾತೆ ನಿನ್ನಯ
ಕಿರಿಯ ಶ್ರೀಕೃಷ್ಣನನು ಸ್ಮರಿಸೆಂದೆನಲು ತಕ್ಷಣದಿ ॥ ೧೦೬

ದ್ವಾಪರಾಂತ್ಯದಿ ಕೃಷ್ಣಯುಗದಿಂ
ಪೋಪನೆಂಬುದ ತಿಳಿದು ಬಹು ಸಂ
ತಾಪದಿಂದ ಯಶೋದೆ ಮಗನನು ಕಂಡು ದುಃಖಿಸುತ ।
ಈ ಪರಿಯ ಚೆಲು ಬಾಲಲೀಲೆಯ
ದ್ವಾಪರದ ಯೌವನದ ನಿತ್ಯ ಕ
ಲಾಪವನು ನಾ ಕಂಡೆ ನಿನ್ನ ವಿವಾಹವೊಂದುಳಿದು ॥ ೧೦೭

ಮಗನೆ ನಿನ್ನ ವಿವಾಹವೊಂದರ
ಬಗೆಯು ಕರುಣಿಸು ತಣಿವೆನೆಂದವ
ಳಘಗಳಾಂತ್ಯನ ಮುಂದೆ ಬಹುವಿಧದಿಂದ ರೋಧಿಸಲು ।
ಯುಗದ ಕಡೆಯೊಂದಳಿದು ನಾ ಕಲಿ
ಯುಗದಿ ವೆಂಕಟನಾಗಿ ಜನಿಸುವೆ
ಸೊಗದಿ ನೀನೆಮಾಡು ಮದುವೆಯನೆನುತ ಶ್ರೀಕೃಷ್ಣ ॥ ೧೦೮

ಈಸು ದಿನಗಳು ನೀನು ಶೇಷಾ
ವಾಸಿಸ್ವಾಮಿ ವರಾಹ ಮೂರ್ತಿಯು
ಪೋಷಿಸುತಲಿರು ಬರುವನಲ್ಲಿಗೆ ಪೋಗುನೀನೆಂದ ।
ಲೇಸಿದೆಂದು ಯಶೋದೆ ಸುತನಾ
ದೇಶದಲಿ ನಿಜಭಕ್ತಳಾದಳು
ಶೇಷಚಲದಿ ವರಾಹ ಮೂರ್ತಿಗೆ ನಿತ್ಯಪರಿಯಂತ ॥ ೧೦೯

ಸನಕ ಸನಂದರುಗಳೊಂದಿನ
ಮುನಿಯ ವೇಷವ ಮರೆಸಿ ಗುಬ್ಬಿಯು
ತನುವಿನಲಿ ವೈಕುಂಠವಾಸನ ಭವನಕ್ಕೈತರಲು ।
ವಿನಯದಿಂ ಜಯ ವಿಜಯರಿವರನು
ಮನಕರಿಸಿ ಮಂದಿರಕೆ ಬಿಡದಿರೆ
ಮುನಿದ ಮುನಿಗಳು ಶಾಪವಿತ್ತರು ದ್ವಾರಪಾಲರಿಗೆ ॥ ೧೧೦

ರಕ್ಕಸಾಕಾರದಲಿ ಭೂಲೋ
ಕಕ್ಕೆ ಹೊರೆಯಾಗೆಂದು ಶಪಿಸಲು
ಚಿಕ್ಕವರ ತಪ್ಪಿದನು ಮನ್ನಿಸಬೇಕು ನೀವೆನಲು ।
ರಕ್ಕಸರು ಮೂಜನ್ಮದಲಿ ನೀ
ಲಕ್ಕಿಸದೆ ಶ್ರೀಹರಿಗೆ ಸೆಣಸುತ
ತಕ್ಕ ಶಿಕ್ಷೆಯೊಳಳಿಯೆ ನಿಮ್ಮಯ ಶಾಪಗಳೆಯುವುದು ॥ ೧೧೧

ಶಾಪ ಪೀಡಿತ ಜಯನು ವಿಜಯನು
ತಾಪದಲಿ ಶ್ರೀಹರಿಗೆ ವಂದಿಸಿ
ಕೋಪದಲಿ ಮುನಿವರರು ನೀಡಿದ ಶಾಪಗಳೆಯೆನಲು ।
ತಾಪಸೋತ್ತಮರಿತ್ತ ಶಾಪವ
ದಾಪರಾತ್ಪರ ಶಿವನಿಗಸದಳ
ಈಪರಿಯಲಿದ ನೀವನುಭವಿಸಬೇಕೆನುತ ॥ ೧೧೨

ಭುವಿಯೊಳಗೆ ನೀವೇಳುಜನ್ಮವ
ಸವೆದು ಸ್ನೇಹದಿ ಬಾಳುವುದನನು
ಭವಿಸಲನುಚಿತವಾದರನ್ಮೂಳು ಶತ್ರುರೂಪದಲಿ ।
ಅವನಿಯೊಳು ಬರಿ ಮೂರು ಜನ್ಮವ
ನವತರಿಸುತೆನ್ನೊಳಗೆ ಶಪಿಸುತ
ಭವವ ಕಳೆಯಲಿಬೇಕು ನೀವದಗಣಿಸಿ ಹೇಳಿನಲು । ೧೧೩

ಕರುಣಾಸಿಂಧುವೆ ಯಮಗೆ ತಮ್ಮಯ
ಚರಣಸೇವೆಯ ಕಾಲಪರಿಮಿತಿ
ಯರಿತು ದೂರದಿ ಬಾಳಲಾರವು ದೀರ್ಘಕಾಲದಲಿ ।
ತ್ವರಿತದಲಿ ನಿಮ್ಮಡಿಯ ಸೇರಲು
ಚರರು ವೈರಿಗಳಾಗಿ ಬರುವವು
ಕರುಣಿಸೆಂದರು ಮೂರು ಜನ್ಮವ ಸಾಕುಸಾಕೆನುತ ॥ ೧೧೪

ಎಂದ ಮುನಿಗಳ ಶಾಪದಲಿ ಮನ
ಗುಂದಿ ಭುವಿಯಲಿ ಜಯನು ವಿಜಯನು
ಬಂದಿರಣ್ಯ ಹಿರಣ್ಯಕಶ್ಯಪರೆಂಬ ಹೆಸರಿನಲಿ ।
ಕುಂದಿಸುತ ಸುರನರರುಗಳ ಬಹು
ಬಂಧನಕೆ ಗುರಿಪಡಿಸಿ ಭೂಮಿಯ
ನೊಂದು ಚಾಪೆಯ ಪರಿ ಹಿರಣ್ಯಕನೆತ್ತಿಕೊಂಡೋಗಲು । ೧೧೫

ಇತ್ತ ಸುರನರವರ ಮುನೀಶರು
ಚಿತ್ತಜನಕಗೆ ಮೊರೆಯುಲಭಯವ
ನಿತ್ತು ಶ್ವೇತ ವರಾಹ ರೂಪವನೆತ್ತಿ ಶ್ರೀಹರಿಯು ।
ಮತ್ತದಿಂ ಮದಿಸಿದ್ದ ಧನುಜನ
ಸುತ್ತಿ ಸಾಗರ ತಲದಿ ಕೋರೆಯೊ
ಳುತ್ತಮೋತ್ತಮನೊಧಿಸಿ ತಂದನು ಭೂಮಿದೇವಿಯನು ॥ ೧೧೬

ಸುರನರೋರಗರೆಲ್ಲ ಧರೆಯನು
ಮುರಳಿಕಂಪ ವರಾಹ ಮೂರ್ತಿಯು
ಧರೆಯೊಳಗೆ ನೆಲಸಿಲ್ಲಿ ಭಕ್ತರ ಪೊರೆಯೆ ಪ್ರೊಡಮಾಡಲು ।
ಪರಮ ಮಂಗಳಮೂರ್ತಿ ಭಕ್ತರ
ಮೊರೆಗೆ ಮನ್ನಣೆಯಿತ್ತು ನೆಲೆಸಲು
ಸಿರಿಯು ಶೇಷಾಚಲವ ತನಗೆಂದೆನಲು ಭಕ್ತಜನ । ೧೧೭

ಗಿರಿಯ ಮಧ್ಯದೊಳಿದ್ದು ಭಕ್ತರ
ಪೊರೆಯಲನುದಿನ ದೇವನಿಲಯವ
ನರರು ಸುರರುಗಳೆಲ್ಲ ನಿರ್ಮಿಸಿ ಶುಭ ಮುಹೂರ್ತದಲಿ ।
ಹರಿಯು ತನ್ನ ವರಾಹ ರೂಪದ
ವರದ ನೆಲೆಸಲು ಬೇಡಲುತ್ಸುಕ
ಕರೆದು ವರಗಳನಿತ್ತು ಸಲಹುತ್ತಿರುವ ಭಕ್ತರನು । ೧೧೮

ನಿತ್ಯ ನಿರ್ಮಲ ಚಿತ್ತದಲಿ ಹರಿ
ಸತ್ಯಸಂಧರಿಗಭಯ ಹಸ್ತದ
ಸ್ತುತ್ಯನಾಗಿರಲವಗೆ ಬಕುಳಾದೇವಿ ಹುಟ್ಟಿನ ಭಕ್ತಳೆಂದೆನಿಸಿ ।
ನಿತ್ಯ ಬಕುಳೆ ವರಾಹ ಮೂರ್ತಿಯ
ನತ್ಯಧಿಕ ಭಕ್ತಿಯೊಳು ಪೂಜಿಸಿ
ನಿತ್ಯದಲಿ ನಿಜಭಕ್ತಳಾದಳು ಬಕುಳಶೀವರೆಗೆ । ೧೧೯

ದೇವ ದೇವ ವರಾಹ ನಿನ್ನನ
ದಾವ ಪರಿಯಲಿ ತಣಿಸಲೆಂದಾ
ಭಾವಜನಪಿತಮಾತೆ ಶೇಷಾಚಲದ ಪಾಲಕನ ।
ದೇವನಿಸ್ವಾರ್ಥದಲಿ ಬಕುಳಾ
ದೇವಿ ಪೂಜಿಸುತಷ್ಟವಿಧದಲಿ
ತೀವಿದತಿ ಸಂತೋಷದಿಂದವಳಲ್ಲಿ ನೆಲಸಿದಳು । ೧೨೦

ಸನ್ನುತಾಂಗನ ದೃಷ್ಟಿಸಲು ಚಲು
ಚನ್ನಕೃಷ್ಣನ ರೂಪ ತೋರಿದ
ನಿನ್ನ ಬಕುಳಾಮಾತೆ ಮೈಮರೆತಂತೆ ದೃಷ್ಟಿಸುತ ।
ನನ್ನ ಕಂದನೆ ನಿನ್ನ ನೋಡಿದೆ
ನಿನ್ನು ಬಾರೆಂದವನ ಬಾಚುತ
ಮುನ್ನಿನತಿ ಸಂತೋಷದಲಿ ನಲಿದಾಡಿದಳುಬಕುಳೆ ॥ ೧೨೧

ಮೀರಿದರುಷಾಬ್ಧಿಯಲಿ ದೇವನ
ಸೇರಿ ಬಹುವಿಧಸ್ನಾನಭೋಜ್ಯವಿ
ಚಾರವೆಲ್ಲವ ಮುಗಿಸಿ ಮರುದಿನ ಶೇಷಚಲದೆಡೆಗೆ ।
ಸಾರಿ ಬಂದು ವರಾಹ ಮೂರ್ತಿಯ
ತೋರಿ ಪೂಜಿಸಿ ಭಕ್ತಿಭಾವದಿ
ಮಾರಜನಕನ ಪರಿಯನೆಲ್ಲ ವರಾಹಮನಗೊಂಡ ॥ ೧೨೨

ಶೇಷಚಲದ ವರಾಹನೊಳು ಸಂ
ಭಾಷಿಸುತ ಕೇಳಿದನು ನೆಲಸಲು
ಶೇಷತಲ್ಪಪ್ರಶಾಂತ ಭೂಮಿಯ ಗಿರಿಯ ಮಧ್ಯದಲಿ ।
ವಾಸಿಸಲು ನಾ ಕೊಡುವ ಸ್ಥಾನಕೆ
ಲೇಸ ಬೆಲೆಯನು ಕೊಟ್ಟು ಕೊಳ್ವುದು
ಲೇಸೆನಲು ಹರಿ ಲಕ್ಷ್ಮಿಯಿಲ್ಲದೆ ಧನಕೆ ಚಿಂತಿಸುತ ॥ ೧೨೩

ಲಲನೆಯಿಲ್ಲದೆ ಕುಂದಿರುವ ನಾ
ಬೆಲೆಯ ಕೊಡುವುದಸಾಧ್ಯವಾದರು
ಸಲಿಸಿ ಪೂಜೆಯಮೊದಲು ನಿನ್ನ ವರಾಹ ಮೂರುತಿಗೆ ।
ಬಳಿಕ ಭಕ್ತರಿಗೆನ್ನ ದರುಶನ
ಗಳಿಕೆಯಿದು ನಿಶ್ಚಯವು ದೇವನೆ
ಸಲಿಸು ಸ್ಥಾನವನೆನಲು ಕೊಟ್ಟ ವರಾಹ ನೂರಡಿಯ ॥ ೧೨೪

ಅಭಯವಿತ್ತು ವರಾಹಮೂರ್ತಿಗೆ
ಉಭಯರೊಂದಿಸಿ ನಡೆವರಿತ್ತಲು
ಉಭಯ ಕುಶಲೋಪರಿಯ ಮಮತೆಯ ಮಂದಹಾಸದಲಿ ।
ಅಬುಜನಾಭನ ನಿನ್ನ ಕರೆಯಲು
ಶುಭದ ಹೆಸರೊಂದೆನಗೆ ಪೇಳೆನ
ಲಭಯ ಹಸ್ತನು ಮಾತೆಯುಭರುಚಿಯುನ್ನಲಾಕೆಯಲಿ ॥ ೧೨೫

ಪ್ರೀತಿಯಲಿ ಪಿಡಿದಲ್ಲಿ ಕರವನು
ಮಾತೆ ತಾ ಮನದಿಚ್ಛೆಯಲಿ ಸಂ
ಪ್ರೀತಿಗೊಂಡಳು ಶ್ರೀನಿವಾಸ ಸುನಾಮದಲಿ ಕರೆದು ।
ಈ ತೆರದಿ ಶ್ರೀವಿಷ್ಣುಮೂರ್ತಿಯು
ಪ್ರೀತಿನಾಮವೆ ಶ್ರೀನಿವಾಸನು
ಖ್ಯಾತಿಗೊಂಡಿಹ ಕಲಿಯುಗದ ನಿಜಭಕ್ತಮಂಡಲಕೆ ॥ ೧೨೬

ಅಂದು ಹರಿಯು ವರಾಹನಿಗೆ ಮುದ
ದಿಂದ ಪೇಳಿದ ತೆರದಿ ಭಕ್ತರ
ವೃಂದ ಪುಷ್ಕರಣಿಯಲಿ ಮಿಂದು ವರಾಹ ಮೂರುತಿಯ ।
ಸುಂದರುಶನವೆ ಮೊದಲಿಂ ನಂತರ
ಮುಂದೆ ಜನ ಶ್ರೀ ವೆಂಕಟೇಶನೆ
ತಂದೆ ಕಲಿಯುಗಕೆಂದು ನೈವೇದಿಸುವರಭಿಮತವ ॥ ೧೨೭

ಕಲಿಯುಗದಿ ಶ್ರೀ ವೆಂಕಟೇಶ್ವರ
ನೊಲಿದು ಭಕ್ತರ ಪೊರೆವನಲ್ಲದೆ
ಚೆಲುವ ಮೂರ್ತಿಯ ದರುಶನವು ಬಲುಸಿರಿಯು ಕಣ್ಮನಕೆ ।
ಫಲಿಸುವುದು ತಮ್ಮಿಷ್ಟ ಜನರಿಗೆ
ಸಲಿಸುವತಿ ಭಕ್ತಿಯಲಿ ಮನವನು
ಸುಲಭವಿದು ಸಜ್ಜನಕೆ ಮನಸಿನ ನಿಷ್ಠೆಯೊಂದಿರಲು ॥ ೧೨೮

ಹತ್ತು ಮೈಲಿಯುಂ ತಿರುಪತಿಗೆ ಮೆರೆ
ದಿತ್ತು ನಾರಾಯಣಪುರಕೆ ದೊರೆ
ಯತ್ತ ಮಾಡ್ಯಸುಧರ್ಮ ಪಾಲಿಸುತಿದ್ದ ಪ್ರಜೆಗಳನು ।
ಇತ್ತ ಶ್ರೀ ವಿಷ್ಣುವಿನ ಶಾಪವ
ಹೊತ್ತು ರಕ್ಕಸನಾಗಿ ಚೋಳನು
ಸುತ್ತಿ ಜನ್ಮಾಂತರದಿ ಪೊಕ್ಕ ಸುಧರ್ಮನುದರವನು ॥ ೧೨೯

ರಾಜನರಸಿಯ ಗರ್ಭದಲಿ ಬಹು
ತೇಜದಿಂದುದ್ಭವಿಸಲಾತಗೆ
ಮೋಜಿನಿಂದಾಕಾಶರಾಜನ ಪೆಸರಕೀರ್ತಿಯಲಿ ।
ರಾಜ ಸಲಹುತಲೊಂದು ದಿನ ಮೃಗ
ರಾಜ ಬೇಟೆಗೆ ತೆರಳಿ ವಿಪಿನದಿ
ರಾಜನಾಯಾಸದಲಿ ಸೇರಿದ ಕಪಿಲತೀರ್ಥವನು ॥ ೧೩೦

ಆ ಸುಧರ್ಮನು ಕಪಿಲತೀರ್ಥದಿ
ಘಾಸಿಕಳೆಯಲು ಮಿಂದು ಬಳಿಯಲಿ
ಆಸರೆಯ ಪಡೆದಲ್ಲಿ ಕುಳಿತಿರಲೊಂದು ತರುವಿನಡಿ ।
ಆ ಸರೋವರ ತೀರದಲ್ಲಿ ಮ
ಹೀಶನೀಕ್ಷಿಸಿ ನಾಗಕನ್ಯೆಯ
ನಾಸೆ ಪರವಶನಾಗಿ ವಿವರವನರಿತು ಮೋಹಿಸಿದ ॥ ೧೩೧

ದಾಹದಿಂದಾಕೆಯೊಳು ರಾಜವಿ
ವಾಹ ನಿಜಗಾಂಧರ್ವ ವಿಧದಲಿ
ಊಹೆ ಇಲ್ಲದೆ ನಡೆದು ಗರ್ಭವ ಧರಿಸಲಾಕೆಯಲಿ ।
ರಾಹುಗಳಿದಾ ಶಶಿಯ ತೇಜದ
ಮೋಹನಾಂಗನು ಮಗನು ಜನಿಸಿದ
ಭೂಹಿತಕೆ ಪೆಸರಾದನಾತನೆ ತೊಂಡಮಾನನನು ॥ ೧೩೨

ಹಿರಿಯ ಮಗನಾಕಾಶ ರಾಜಗೆ
ಧರೆಯ ಪಟ್ಟವ ಕಾಲಗತಿಯಲಿ
ದೊರೆ ಸುಧರ್ಮನು ಕಟ್ಟಿ ತನ್ನಯ ಕಣ್ಣ ಮುಚ್ಚಿದನು ।
ಧರೆಯ ದೊರೆಯಾಕಾಶರಾಜಗೆ
ಧರಣಿ ದೇವಿಯು ರಾಣಿ ಪ್ರಜೆಗಳ
ಪರಮ ಪ್ರೀತಿಗೆ ಪಾತ್ರರಾದರು ರಾಜಭಕ್ತಿಯಲಿ ॥ ೧೩೩

ಷೋಡಷಿ ಪತಿಯಾಕಾಶರಾಜನ
ಮಡದಿ ಧರಣಿದೇವಿಯಿವರಿಗೆ
ಬಿಡದಲಡರಿತೊಂದು ಸಿರಿಸಂತಾನದಾ ಕೊರತೆ ।
ಕೊಡದ ದೇವನಿಗಿಷ್ಟವಿಲ್ಲದ
ಕೊಡುಗೆ ದೊರೆವುದದೆಂತು ಮಾನವ
ಬಿಡದೆ ತಪಿಸಿದರವನ ಭ್ರಾಂತಿಯ ಕಡಲಮಧ್ಯದಲಿ ॥ ೧೩೪

ಸಂತತಿಯ ಸುಖವಿಲ್ಲದಿರಲತಿ
ಚಿಂತೆಯಿಂದಾಕಾಶಭೂಪನು
ಕಂತುಜನಕನ ಭಜಿಸೆ ಕೋರಿದ ಯಜ್ಞದಾಶ್ರಯವ ।
ಇಂತಿರಲು ಶುಕಮುನಿಯು ಯಾಗವ
ನೆಂತು ನಡೆಸುವುದೆಂದು ಪೇಳಲು
ಸಂತಸದಿ ಕೈಗೊಂಡ ನಿಜಸಂತಾನವರಕ್ರತುವ ॥ ೧೩೫

ಕರೆದನಲ್ಲಿಗೆ ರಾಜ ಧರಣೀ
ಸುರರ ಮುನಿಗಳನೆಲ್ಲ ರಾಜ್ಯದ
ದೊರೆಗಳನು ಸಮ್ಮುಖದಿ ಕೈಗೊಳಲೆಂದು ಯಜ್ಞವನು ।
ಸುರನರೋರಗರೊಳಗೆ ಬಹು ದು
ಸ್ತರದ ಯಜ್ಞವಿದೆಂದು ನುಡಿದರು
ನೆರೆದಬಹುಸಂಖ್ಯಾತ ಸಜ್ಜನಶ್ರೇಷ್ಠ ಗುಣಯುತರು ॥ ೧೩೬

ತಂಗಳಿಗೆ ಬಹು ರಮ್ಯಸಜ್ಜನ
ಸಂಘವಿದು ಸರ್ವೇಷ್ಟದಾಯಕ
ಮಂಗಳವು ನವುಗೆಂದು ಹಿಗ್ಗಿದ ರಾಜತೃಪ್ತಿಯಲಿ ।
ಮಂಗಳದ ಶುಭಸೂಚನೆಯ ಸ
ರ್ವಾಂಗ ಕರ್ತೃಗಳದ್ದರಾ ಕ್ರತು
ರಂಗದಲಿ ತನ್ನಿಷ್ಟಸಂಪದ ಫಲದ ಪುಷ್ಯಳಿಗೆ ॥ ೧೩೭

ಸಾಗಿದನು ಆಕಾಶರಾಜನು
ನೇಗಿಲಲಿ ಭೂಮಿಯನು ಬಗೆಯಲು
ತಾಗಿದುದು ನೇಗಿಲಿಗೆ ಭೂಮಿಯೊಳೊಂದು ಪೆಟ್ಟಿಗೆಯು ।
ತ್ಯಾಗಿಗಳ ಸಂತೃಪ್ತಿಯಿಂದದಿ
ಭೋಗಿಗಳ ಸೌಭಾಗ್ಯರತ್ನವಿ
ದಾಗಿ ಲಭಿಸಿತು ದೊರೆಗೆ ಪೆಟ್ಟಿಗೆಯೊಳಗೆ ಶಿಶುವೊಂದು ॥ ೧೩೮

ಶಿಶುವ ನೃಪತಿಯು ತಂದು ತನ್ನಯ
ಕುಸುಮನೇತ್ರೆಗೆ ಕೊಡಲು ಕತ್ತಲೆ
ಕುಸುಮ ಸೂನುದಯದಲಿ ಸರಿದಂತಾಯ್ತು ನಿಜಸತಿಗೆ ।
ಮುಸುಕಿದ ಬಂಜೆತನವೆಮ್ಮನು
ಬಿಸುಟುಹೋಯಿತು ಮುದ್ದು ಕುವರಿಯು
ದೆಸೆಯೊಳಿಂದಾ ರಾಣಿ ಹಿಗ್ಗಿದಳಸಮ ಸಂತಸದಿ ॥ ೧೩೯

ಹೆಣ್ಣು ಶಿಶುವೆಂದನಲು ಕೆಲ ಜನ
ಹೆಣ್ಣು ಕಡೆಯೇನಲ್ಲವೆಂಬರು
ಹೆಣ್ಣು ಸಕಲಕೆ ಲೇಸು ಹೆಣ್ಣಿನ ಪೆರ್ಮೆ ಸರ್ವಹಿತ ।
ಹೆಣ್ಣು ಬ್ರಹ್ಮನ ತೊಡೆಯನೇರಿತು
ಹೆಣ್ಣು ಶ್ರೀಹರಿ ಯೆದೆಯನೇರಿತು
ಹೆಣ್ಣು ಹರಶಿರವೇರಿತೆನಲದಕಿನ್ನಾರು ಸಮವೆನುತ ॥ ೧೪೦

ದೊರೆತ ತಾಯ್ತನದಿಂದ ಹಿಗ್ಗಿದ
ತರುಣಿ ರಾಣೀವಾಸದಲಿ ಸಖಿ
ಯರುಗಳೊಂದಿಗೆ ಚಂದ್ರಕಳೆಗಿಮ್ಮಿಗಿಲು ಕಾಂತಿಯಲಿ ।
ಕರೆಕರೆದು ಸಕಲೆಲ್ಲ ಹಿತರನು
ಮರೆತು ಪೇಳುತಲಿದ್ದಳಿಲ್ಲವ
ತರಳೆಯೋರ್ವಳಿಗಿಲ್ಲ ಸರಿಸಮವೆಲ್ಲ ಸಿರಿಯೆನುತ ॥ ೧೪೧

ನೋಡಿ ದಣಿಯಳು ಮಗಳ ರೂಪವ
ಪಾಡಿ ದಣಿಯಳು ಹಿಗ್ಗುನುಡಿಗಳ
ಹಾಡಿ ದಣಿಯಳು ಮಗಳ ಚೆಲುವಿನ ಹಾಡನುಡಿಗಡಿಗೆ ।
ಮೂಡಿದತಿ ಸಂತಸದಿ ಬಹು ಕೊಂ
ಡಾಡಿ ದಣಿಯಳು ರಾಣಿ ಮನಸಿಗೆ
ರೂಢಿಯಲಿ ಮಿಗಿಲಿಲ್ಲವೆನ್ನುತ ತನ್ನ ಸಿರಿತನಕೆ ॥ ೧೪೨

ಕಥೆಯಿದಾಯಿತು ರಾಣಿಬಾಯಿಗೆ
ಸುತೆಯು ದೊರೆತಿಹ ಸಿರಿಯ ಸೊಂಪಿನ
ಮತಿವಿಕಳೆ ತಾನಾಗಿ ಮರೆದಳು ಮಮತೆವೆಗ್ಗಳಿಸಿ ।
ಪತಿಯ ಕರೆಸೇಳಿದಳು ತಮ್ಮಯ
ಸುತೆಯ ಜಾತಕದಧಿಕ ಫಲಗಳ
ನತಿಶಯದಿ ತಿಳಿಸೆನುತ ಕುವರಿಯ ಭವ್ಯಭಾಗ್ಯಗಳ ॥ ೧೪೩

ಧರೆಯ ಭೂಸುರ ಮುನಿಜನಂಗಳ
ಕರೆಸಿ ನೋಡಲು ಜನ್ಮಜಾತಕ
ಸಿರಿಯ ಪದ್ಮಾವತಿಯ ಪೆಸರದು ಸರಿಯುದೆಂದೆನಲು ।
ಧರಿಸಿ ಶುಭಲಗ್ನದಲಿ ನಾಮವ
ಸುರನರೋರಗರೊಳಗೆ ಕುವರಿಯ
ಸರಿಸಮರ ನಾವರಿಯೆವೆಂದರು ನೈಜಸತ್ವದಲಿ ॥ ೧೪೪

ವೃದ್ಧಿ ಚಂದ್ರನ ತೆರದಿ ವಿದ್ಯಾ
ಬುದ್ಧಿಗಳು ದಿನದಿನಕೆ ಕುವರಿಯೊ
ಳೆದ್ದು ದಿನಮಣಿಯಂತೆ ಬೆಳಗುತಲಿರಲು ಸಂತತಿಯು ।
ಮುದ್ದು ಮಗಳಿಗೆ ತಕ್ಕ ವರನವ
ನಿದ್ದರೆಲ್ಲಿಹನೆಂದು ತಿಳಿಯುವ
ಸುದ್ದಿಯನು ಪ್ರಕಟಿಸಲು ಬಂದರು ನಾರದರು ತಿಳಿದು ॥ ೧೪೫

ದೇವ ಮುನಿಯನು ಕಂಡು ನಿಜ ಸ
ದ್ಭಾವದಲಿ ಪೊಡಮಟ್ಟು ಚರಣಕ
ದಾವ ಕಡೆಯಿಂದಿಲ್ಲಿಗೈದಿಹರೆಂದು ಬೆಸಗೊಂಡು ।
ಭಾವಿಪವು ನಮ್ಮನಿತು ಪುಣ್ಯ ಪ್ರ
ಭಾವವಿದು ತಾವಿಲ್ಲಿಗೈದುದು
ಪಾವನವು ತಾವೆಂದು ರಾಜನು ಮುನಿಯ ಸತ್ಕರಿಸಿ ॥ ೧೪೬

ಧರಣಿಪತಿ ನಾವೆಲ್ಲಿಗಾದರು
ಬರಿದೆ ಬರುವವರಲ್ಲವೆಂಬುದ
ರರಿವು ಮೂಲೋಕದಲಿ ತಾ ನಿಜವಲ್ಲದಿಲ್ಲೆಂದ ।
ಕರೆದು ರಾಜನು ತನ್ನ ತನುಜೆಯ
ಕರದ ಭಾಗ್ಯವ ಕೇಳೆ ನಾರದ
ಹರಿಯು ವರಿಸುವನಿವಳನೆಂದನು ಹಸ್ತರೇಖೆಯಲಿ ॥ ೧೪೭

ಎಂದು ಪೇಳಲು ನಾರದನು ಮನ
ಕೊಂದು ತೋರದೆ ಧರಣಿಪನು ಸಾ
ನಂದದಲಿ ಕಡುಹಿಗ್ಗಿ ಮತ್ತಿಂತೆಂದನಾ ಮುನಿಯ ।
ಮಂದಮತಿಗಳು ನಾವು ದೈವದ
ಚಂದಿರನು ಶ್ರೀ ಹರಿಯು ನಮ್ಮಯ
ಮಂದಿರದ ನಂಟನಗೆ ವಿಸ್ಮಯ ವಿವರವೇನೆಂದ ॥ ೧೪೮

ಜನಪ ನೀ ಕೇಳಿನ್ನು ಲೋಕದ
ಘನತೆಯಲಿ ಕೇಳಿಲ್ಲ ಜನಗಳ
ಮನಕೆ ಕೇಳ್ಕೇಲುಂಟು ತನ್ನಯ ತಾನೆ ಮರೆತವಗೆ ।
ಅನುದಿನದಿ ಮತಿವಂತ ತನುಮನ
ವಸ್ತುಗಳನು ನೆನೆಯದಲೆ ಸಿರಿ
ವನಿತೆಯೊಬ್ಬಳ ನಂಬಿ ಮಿಕ್ಕುದ ಮರೆವುದಲ್ಲೆಂದ ॥ ೧೪೯

ಸತಿಸುತರ ನಶ್ವರದ ಭ್ರಾಂತಿಗೆ
ಮತಿವಿಕಳ ತಾನಾಗಿ ನಿಜ ಸ
ದ್ಗತಿಗೆ ಕಾರಣವಾವುದೆಂಬುದ ಮರೆತು ಮಾನವನು ।
ಖತಿಗೊಳದೆ ತನ್ನಾತ್ಮವಿಷ್ಟರ
ಜೊತೆಯು ಬಾಳದು ಲೇಸು ಕಲಿಯುಗ
ದತಿಶಯವು ಕೇಳೆಂದು ನಾರದ ನುಡಿದ ಧರಣಿಪಗೆ ॥ ೧೫೦

ಸೃಷ್ಟಿಯಿದು ನಮಗಲ್ಲ ದೇವನಿ
ಗಿಷ್ಟವಾಗಿಹುದೆಂದು ತಿಳಿದೊಡೆ
ಕಷ್ಟನಷ್ಟಗಳನ್ನು ನಮ್ಮಯ ದೃಷ್ಟಿಭ್ರಾಂತಿಮಯ ।
ಇಷ್ಟವಿದು ನಮಗೆಂದು ಗೈದುದ
ದೆಷ್ಟು ಸಿದ್ಧಿಹುದೆಂದು ತಿಳಿದವ
ರೆಷ್ಟು ಜನ ಲೋಕದಲಿ ನೀನಿದ ಮರೆಯಬೇಡೆಂದ ॥ ೧೫೧

ಜಾತಿರೋಗದ ಮಾತು ಸೃಷ್ಟಿವಿ
ಧಾತ ಕರ್ತೃವು ಮನುಕುಲದ ಸಂ
ಪ್ರೀತಿಯಿಲ್ಲದ ಬಾಳಿನ್ನುಜ್ವಾಲೆ ನರರೊಳಗೆ ।
ನೀತಿತತ್ಪರನಾಗಿ ನಿಜ ವಿ
ಖ್ಯಾತಿ ಗಳಿಸಿದನಾವನಾಗಲಿ
ಪ್ರೀತಿಗೊಳ್ಳುವನಿಹಪರಂಗಳ ಸರ್ವಮೇಳದಲಿ ॥ ೧೫೨

ಧರ್ಮವೆಂಬುದು ತನ್ನಭೀಷ್ಟದ
ಪೆರ್ಮೆಯನ್ನಿತರರಲಿ ಬಯಸುವ
ಮರ್ಮವಲ್ಲದೆ ಮತ್ತೆ ತಾ ಬೇರಿಲ್ಲ ಬದುಕಿನಲಿ ।
ಧರ್ಮವನು ಧಿಕ್ಕರಿಸಿ ಸುಲಭದಿ
ಕರ್ಮಕೂಪದಲಿಳಿವ ನರರಿಗೆ
ನಿರ್ಮಲವು ಬರಿಕನಸು ಮಾತ್ರವದೆಂದ ನಾರದನು ॥ ೧೫೩

ಪಾರಮಾರ್ಥದ ಸೋಗಿನಲಿ ನಿ
ಸ್ಸಾರವಾದರು ಕೆಲರು ಜನ್ಮದ
ಸಾರ ಹೊಣೆಯನು ಮರೆತು ತಮ್ಮಯ ಕರ್ಮಶ್ರದ್ಧೆಯಲಿ ।
ಮೀರಿವರ್ಥವದೇಕೆ ದೈವದ
ಪ್ರೇರಣೆಗೆ ಸಿಲುಕಿರುವ ನರರಿಗೆ
ಮೂರು ಕರಣಂಗಳಲಿ ಶ್ರೇಷ್ಠವ ಬಯಸೆ ಸಾಕೆಂದ ॥ ೧೫೪

ನಾಲಿಗೆಯು ಬದುಕಿಂದು ನೋಡಲು
ಸಾಲದದಕಿನ್ನೆಷ್ಟು ತಿಂದರು
ಮೂಲದಲಿ ಸವಿಯುಂಡು ನೂಕುವುದೆಲ್ಲ ಭಾರವನು ।
ನಾಲಿಗೆಯ ಹಿಡಿತಕ್ಕೆ ತಪ್ಪಲು
ಕೀಳು ನುಡಿಗಳ ನುಡಿದು ಸುಲಭದಿ
ಬಾಳ ಕೆಡಿಸುವುದೆಂಬುದನು ನೀ ಮರೆಯಬೇಡೆಂದ ॥ ೧೫೫

ಹೆಣ್ಣು ಹೊನ್ನಿನ ಮೋಹ ಮನಸಿನ
ಕಣ್ಣ ಕಳೆವುದನರಿದು ಸಜ್ಜನ
ಸಣ್ಣವೆಂದಿವ ತಿಳಿದು ಬಾಳುವರವರ ಹಿಡಿತದಲಿ ।
ಹುಣ್ಣಿಮೆಯ ಬೆಳಕಿರಲು ಸಾಲದೆ
ಸಣ್ಣ ಶಶಿಯನು ತರಲು ಹೋದವ
ಮಣ್ಣು ಮುಕ್ಕುವನಲ್ಲದಲೆ ಬರಿಭ್ರಮೆಗೆ ಸಿಲುಕುವನು ॥ ೧೫೬

ಉತ್ತಮರು ನಾವೆಂದು ಕೆಲಜನ
ಮತ್ತರಾಗಿಹರವರು ಮನಸಿನ
ಚಿತ್ತವೆಗ್ಗಳಿಕೆಯಲಿ ಸಾತ್ವಿಕ ಗುಣವ ಕಡೆಗಣಿಸಿ ।
ಚಿತ್ತದಲಿ ನೆಲೆಯಿಲ್ಲದಾತನು
ಸುತ್ತಲಿನ ಫಲವಿಲ್ಲ ಲೋಕದ
ವೃತ್ತಿಯಲಿ ತಾ ಕಾಣಲಾರನು ಶಾಂತಿಸೌಖ್ಯವನು ॥ ೧೫೭

ಲೋಕದೊಳಗುಗ್ಗಳಿಯ ಸಿರಿತನ
ಬೇಕು ನಮಗೆಂಬವರು ಬಡವರ
ನೇಕ ಧಿಕ್ಕರಿಸುವರು ತಮ್ಮಯ ಸಿರಿಯ ಸೋಗಿನಲಿ ।
ಬೇಕುಬೇಡೆಂದುಸುರಲಾರದ
ಮೂಕಪ್ರಾಣಿಗಳಂತೆ ಕಾಣ್ವರ
ನೇಕ ದೀನರ ಸಿರಿಯು ಪರಮಾವಧಿಯ ಸೊಕ್ಕಿನಲಿ ॥ ೧೫೮

ಬಳಕೆಯಿಲ್ಲದ ತನ್ನದುಡಿಮೆಯು
ಗಳಿಕೆಯದು ದುಷ್ಕರ್ಮಶೇಷವ
ಸುಳಿಸುವುದು ಸಂಪನ್ನ ಜೀಳಿಗೆಗಳಿಗೆ ಪಾಪಮಯ ।
ತಿಳಿವಜನ ತಮ್ಮಿಚ್ಛೆಯಲಿ ಬಹು
ಗಳಿಸಿ ಮೋಸದ ಮಾರ್ಗದಲಿ ದಿನ
ಕಳೆಯಲೋಸುವನಾವನಾದರು ದೈವದ್ರೋಹಿಯವ ॥ ೧೫೯

ಪೇಳಬೇಕೈ ಮುನಿಕುಲೋತ್ತಮ
ಕೇಳ ಬಯಸುವೆ ಬ್ರಹ್ಮ ಸೃಷ್ಟಿಯ
ಜಾಲದಲಿ ಸುರನರರುಗಳಿಗಿಹುದಾವ ಸಂಬಂಧ ।
ಕಾಲ ಬೇಸರವಾಗದಂತಹ
ಲೀಲೆಯನು ಭಕ್ತಿಯಲಿ ನೃಪ
ನಾಲಿಸುತ್ತಿರುವಂತೆ ನಾರದ ಪೇಳಲನುವಾದ ॥ ೧೬೦

ಸೃಷ್ಟಿಯಲಿ ಸಕಲೆಲ್ಲ ಜೀವಿಯು
ದೃಷ್ಟಿಯಲಿ ಬಹುಶ್ರೇಷ್ಠ ಮಾನವ
ನಿಷ್ಟನಾಗುವನೆಲ್ಲರಿಗೆ ನಿಜಭಾವ ಶ್ರದ್ಧೆಯಲಿ ।
ಕಷ್ಟ ಸುಖಗಳನರಿವ ಶ್ರೇಷ್ಠೋ
ತ್ಕೃಷ್ಟ ಜ್ಞಾನದ ಬಲವು ಮನುಜನಿ
ಗಿಷ್ಟು ಪುಣ್ಯವೊ ದೈವಕೊಡುಗೆಯಿದೆಂದನಾ ಮುನಿಪ । ೧೬೧

ಗಳಿಸುವುದು ಬಹುಮುಖ್ಯ ಮಿಕ್ಕದ
ನುಳಿಸುವುದೂ ಬಹು ಶ್ರೇಷ್ಠ ತನ್ನಯ
ಕಲುಷ ಕರ್ಮಗಳಿಲ್ಲದೆಲ್ಲವನಿಳೆಯ ಜಾಣರಿಗೆ ।
ಬಳಕೆಯಲಿ ತನ್ನಂತೆ ದೀನರ
ನುಳಿಸಿಕೊಂಡವನಾವನಾದರು
ಗಳಿಸುವನು ತಾ ತುಳಸಿಮಾಲಾಧರನ ಮನ್ನಣೆಯ । ೧೬೨

ಆವ ಮನುಜನು ತನ್ನ ಚಿತ್ತದ
ಭಾವನೆಯ ಮುಡಿಹಿಡಿದು ನಡೆದವ
ದೇವರಿಗೆ ಸಮನಹನು ಮೂಜಗದೊಳಗೆ ತಿಳಿಯೆಂದ ।
ಜೀವಿಯಾಗಲಿ ಮೇಣು ಸತ್ವಪ್ರ
ಭಾವಿಯಾಗಲಿ ಬಾಳ ಬದುಕಿನ
ಕೋವಿದನು ತಾನೆಂಬ ಗರ್ವವ ಮರೆಯಬೇಕೆಂದ । ೧೬೩

ಸಿರಿಯುಂಡರಿ ಕೆಲಜನರು ತಮ್ಮಯ
ಪರಿವೆಯನು ಮರೆತಿರುವರಲ್ಲದೆ
ಧರೆಗೆ ನಾವೇ ಶ್ರೇಷ್ಠರೆಂದರರದವರ ದುಷ್ಕರ್ಮ ।
ಕರುಬು ಬೇಡುಳ್ಳವಗೆ ಮನದಲಿ
ನೆರೆಯು ಸಿರಿಯೇ ನಮಗೆ ಸರಿಯೊ
ದರಿತರದು ನೆಮ್ಮದಿಗೆ ಕಾರಣವೆಂದ ನಾರದನು । ೧೬೪

ಸೋಕೋಶ್ರೀ -

ಸರ್ವಗುಣ ಸಂಪನ್ನ ಸುತತಾ
ನೋರ್ವನಿಲ್ಲದ ವಂಶಲತೆಯಂದು
ಸರ್ವಥಾ ಕುಡಿಸಾಗಲಾರದು ನಿಯಮಿತಾರ್ಥದಲಿ ।
ಸರ್ವಕಾಲದ ಪರಿಯನರಿಯದ
ಗರ್ವಿಗಳು ನೂರೆಂಟು ಜನರಿಗೆ
ನಿರ್ವಿಕಾರದ ಸಾತ್ವಿಕನು ತಾನೊಬ್ಬ ಮಿಗಿಲೆಂದ ॥ ೧೬೫

ಕಿವಿಗೆ ಸಿರಿಸಂಗೀತ ಗಾಯನ
ರವಿಗೆ ಸಿರಿ ಬ್ರಹ್ಮಾಂಡ ದರ್ಶನ
ಭುವಿಗೆ ಸಿರಿ ಗಿರಿ ತರುಲತಾಧಿಕ ಕುಸುಮ ನಿಬಿಡಬನ ।
ಸವಿಗೆ ಸಿರಿ ಸಜ್ಜನರ ತಾಳಿಗೆ
ನವಯುಗಕೆ ಸಿರಿ ನಾಗರಿಕ ಸ
ತ್ಕವಿಗೆ ಸಿರಿ ಸಾಹಿತ್ಯದಾಲಂಕಾರ ಕೇಳೆಂದ ॥ ೧೬೬

ಬುದ್ಧಿ ಹೀನರನೊಲಿದು ನೀಡುವ
ಬುದ್ಧಿಯೇ ನಿಜ ವಿದ್ಯೆಯೆಂಬುದ
ನುದ್ಧರಿಸಲಾತಂಗೆ ನಿಜ ಗುರು ಪೀಠವೊಪ್ಪುವುದು ।
ಬುದ್ಧಿಯೊಂದೇ ಸರ್ವಲೋಕದ
ಗದ್ದುಗೆಗೆ ಬಹು ಶ್ರೇಷ್ಠವೆಂಬುದ
ಬುದ್ಧಿವಂತರು ವಾರೆತರಧು ಕಂಟಕವು ಮತಿಯುತಗೆ ॥ ೧೬೭

ಆಶೆಯೆಂಬುದು ಜೀವರಿಗೆ ಯಮ
ಪಾಶ ಸತ್ಯ ವಿನಾಶ ಮಮತಾ
ಕ್ಲೇಶದಾಸೆಗೆ ದಾಸ ಸುಗುಣದ್ವೇಷ ಬಹುವಿರಸ ।
ಲೇಸ ಬಯಕೆಯ ವೇಷ ಸತ್ಯಕೆ
ಮೋಸ ಚಿತ್ತದಿ ದೋಷ ಕರ್ಮವಿ
ಕಾಸ ಸ್ವಾರ್ಥವಿಶೇಷ ದುರ್ಗುಣಪೋಷದವಕಾಶ ॥ ೧೬೮

ಬಂಧುಗಳ ದೂಷಿಸುತ ಪರರನು
ಚಂದದಿಂ ಪೋಷಿಸುವ ಬಾಳದು
ನಿಂದನೆಯು ಬಾಳೆಂದು ತಿಳಿನೀನೆಂದನಾ ಮುನಿಪ ।
ಗೊಂದಲವ ತಿಳಿಗೊಳಿಸಿ ಬಾಳನು
ಮುಂದುವರಿಸುವ ಸಾಧನವ ನಿಜ
ಬಂಧುವೀ ಲೋಕದಲಿ ಸರ್ವಕೆ ಜನಪ ತಿಳಿಯೆಂದ ॥ ೧೬೯

ಧನಮದದ ಬಹುಗರ್ವಿಗಳು ಬಲು
ತನು ಮದದ ನೂರೆಂಟು ಜನ ನಿಜ
ಘನತೆಯರಿಯದ ವಿದ್ಯಚೋರರು ನೂರು ಮಂದಿಗಳು ।
ಜನಕೆ ಸೊಗಸದ ಖೂಳ ಜನರವ
ರನಿತು ಮಂದಿಯು ಬಾಳಿನಲಿ ಸದ್
ವಿನಯ ಗುಣಸಂಪನ್ನನೋರ್ವನಿಗೆಣೆಯೆ ತಿಳಿಯೆಂದ ॥ ೧೭೦

ತಾನು ತನ್ನಯ ತನಗಿದೆನ್ನುವ
ಹೀನಮತಿಗಳ ಮರೆತು ಸರ್ವ ಸ
ಮಾನತೆಗೆ ಮತವಿತ್ತು ಕೂಡುವುದುಚಿತ ಸಜ್ಜನಕೆ ।
ದೀನರಭಿಮಾನದಲಿ ಬದುಕುವ
ಜ್ಞಾನ ನಿಧಿಗಳು ಸರ್ವಶ್ರೇಷ್ಠರು
ನಾನೆಯೆಂಬುದಕಿಂತ ಬಾಳಿಗೆ ನೀನು ಲೇಸೆಂದ ॥ ೧೭೧

ಹುಟ್ಟು ಸಾವಿನ ಗುಟ್ಟಿನಲಿ ಮನ
ವಿಟ್ಟು ಕೆಟ್ಟುದ ಬಿಟ್ಟು ಕಟ್ಟಿನೆ
ನೆಟ್ಟಗಾಗುವ ದಿಟ್ಟತನವಿದು ಸೃಷ್ಟಿಗರ ಪಟ್ಟು ।
ಕೊಟ್ಟ ವರಗಳ ಗಟ್ಟಿಗನು ಜಗ
ಜಟ್ಟಿಯಾತನ ದಿಟ್ಟವರು ಮತಿ
ಗೆಟ್ಟ ಮಾನವ ಹುಟ್ಟಿಗರ್ಹರ ಸಿಟ್ಟು ಬಲುಪೆಟ್ಟು ॥ ೧೭೨

ಸಂತೆಯಿದು ನರಜನ್ಮವಿದರತಿ
ಭ್ರಾಂತಿಯಲಿ ಕೇಲ್ಮುಳುಗಿ ನಿಲುಕದ
ಚಿಂತೆಯಲಿ ತನುಕರಗೆ ಬಾಳಿದು ಬರಡುಗೊಳ್ಳುವುದು ।
ಕಂತು ಜನಕನ ಲೀಲೆಯಲಿ ಮತಿ
ವಂತರೆಲ್ಲರು ನಕ್ಕುನಲಿಯುತ
ಸಂತಸದಿ ದಿನಗಳೆವುದಲ್ಲದೆ ಭ್ರಮೆಯು ಬೇಡೆಂದ ॥ ೧೭೩

ಸಂಕಟಕೆ ಬಲು ಮೂಲದಾಸೆಯು
ಬೆಂಕಿ ಇಲ್ಲದ ದಹನವಿದು ನಿ
ಶ್ಶಂಕೆ ನೆಮ್ಮದಿಯುಂಕವಿಲ್ಲದ ಬಾಳನಾಟಕವು ।
ಮಂಕು ಜನಗಳು ಸರ್ವಗಳಿಕೆಯ
ಸೋಂಕಿನಲಿ ಬಾಳ್ದೊಂಕ ಕಡೆಯಲಿ
ಪಂಕಜೋದರ ಪ್ರೀತಿಗೊಪ್ಪರು ರಾಯ ಕೇಳೆಂದ ॥ ೧೭೪

ಹೊಟ್ಟೆಹಸಿದವನೊಬ್ಬನನುಜನ
ಬಿಟ್ಟು ತಿಂದವರೆಂಬ ಮೇಲವ
ರಟ್ಟೆ ಶಾನರಮನುಜರೆಂಬುದು ಸೃಷ್ಟಿ ಕೌತುಕವು ।
ಉಟ್ಟು ಬೇಸರಗೊಂಡ ತಮ್ಮಯ
ಬಟ್ಟೆಗಳ ಬಡಜನರಿಗಿತ್ತರೆ
ದಿಟ್ಟಸನೆ ಕಂದಾಟ ಜನಕನು ಭೂಪ ಕೇಳೆಂದ ॥ ೧೭೫

ಕಾವದೇವನು ಕೊಟ್ಟ ನಮ್ಮಯ
ಜೀವವಿದರಲ್ಲಿರುವ ನಮ್ಮದ
ದಾವುದೆಂಬುದನರಿಯದಲೆ ಜನ ಬರಿಯ ಮೋಹದಲಿ ।
ನಾವು ನಮ್ಮದು ನಮ್ಮವರು ನಮ
ಗಾವ ಜನರಿದಿರಿಲ್ಲವೆಂಬುದ
ಭಾವನೆಯು ಕಡು ಮೂರ್ಖತನ ನರಪಾಲ ಕೇಳೆಂದ ॥ ೧೭೬

ಆಸೆಯೆಂಬುದನರ್ಥ ಮುನ್ನದೆ
ಘಾಸಿಯಿಲ್ಲದೆ ಬಾಳ ಸತ್ವ ವಿ
ನಾಶ ನಿಜಸದ್ಭಾವವರ್ಜಿತ ಸರ್ವದೋಷಮಯ ।
ಆಸೆಯರಿಯದ ಸಾತ್ವಿಕನು ಸ
ನ್ಯಾಸಿಯಲ್ಲದೆ ಬರಿಯ ಕಾವಿಯ
ವೇಷ ಬಹುವಿಧ ಮೋಸವಿದನೀ ಮರೆಯಬೇಡೆಂದ ॥ ೧೭೭

ನಂಬಿಕೆಯು ಸರ್ವೇಷ್ಟ ಸಾಧನ
ನಂಬಿಕೆಯು ಪರಮೋಚ್ಚ ಪಾವನ
ನಂಬಿಕೆಯು ನಿಜ ಮಹಾತ್ಮ್ಯದರ್ಶನ ಮಿತ್ರಲಾಭಕರ ।
ನಂಬಿ ಕೆಟ್ಟವರಿಲ್ಲ ಜಗದಲಿ
ನಂಬಿಕೆಯೆ ನಿಜ ಬಾಳನೌಕೆಯೊ
ಳಂಬಿಗನು ತಾನೆಂಬುದನು ನೀ ಮರೆಯಬೇಡೆಂದ ॥ ೧೭೮

ನಂಬಿದರೆ ಕಗ್ಗಲ್ಲೆ ದೈವವು
ನಂಬದಿರೆ ನಿಜದೈವ ಜಡಶಿಲೆ
ನಂಬಿಕೆಯು ಮನದೈಕ್ಯವಲ್ಲದೆ ಸಲ್ಲದನ್ಯಮತ ।
ನಂಬಿ ದೈವವ ತೋರಿದನು ಜಡ
ಕಂಬದಲಿ ಶಿಶುವೆಂದ ಮೇಲಿದ
ರಿಂಬನರಿವುದು ಭಕ್ತಿದರ್ಶನವೆಂದನಾ ಮುನಿಪ ॥ ೧೭೯

ಶಕ್ತಿ ಹುದುಗಿಹುದೆಲ್ಲ ಜೀವದಿ
ಶಕ್ತಿಯಿಂದೆ ಜಡಸರ್ವಚರದಲಿ
ಯುಕ್ತಿಯಿಂದಿದನರಿದು ಬಳಸಿಪರದುವೆ ವಿಜ್ಞಾನ ।
ಭಕ್ತಿಯೆಂಬುದನರಿಯದೆಲೆ ನಿಜ
ಮುಕ್ತಿಯನು ಜನಬಯಸಲದು ನಿ
ಶ್ಯಕ್ತಿಯಾಗಿಹುದಧಿಕ ಚಪಲದ ಕ್ರಮಕೆ ಸುಜ್ಞಾನ ॥ ೧೮೦

ಮಂದಿರವು ಮನ ಸಕಲ ನಿಬಿಡಕೆ
ಚಂದಿರನ ಕಳೆಯುಂಟು ಸವಿ ಮನ
ಕಂದು ತಿಳಿದರದೇಕೆ ತುಂಬುವರಲ್ಲಿ ಕುಹಕವನು ।
ಒಂದೆರಡು ಮೂರೆಂದು ಸುಲಭದಿ
ಮುಂದುವರಿದರೆ ದುರಿತಗಳು ಮನ
ಗುಂದದಿರುವುದೆ ದುರ್ವಿಕಾರದ ಮನದ ಮಂದಿರದಿ ॥ ೧೮೧

ಮಾಯಮಯವಾಗಿರುವ ಸೃಷ್ಟಿಗೆ
ನಾಯಕನು ತಾನಾಗಿ ನಮಗೀ
ಕಾಯವಿತ್ತಿಹನವನಿಗಿಷ್ಟವೆನಿಸಿದಾ ಕೃತಿಯು ।
ರಾಯ ನೀ ಕೇಳಿದರೆ ಮೋಹದಿ
ಬಾಯಬಿಡುತಲನೇಕ ಮನುಮುನಿ
ದಾಯ ತಪ್ಪಿದರೆಂದಮೇಲಿದರಿಂಬನರಿಯೆಂದ ॥ ೧೮೨

ತಪವ ಮಾಡುವ ಬಯಕೆಯಾದರೆ
ವಿಪಿನವೇತಕೆ ಸಾತ್ವಿಕರುಗಳು
ವಿಪರೀತಾರ್ಥಕೆ ಸಿಲುಕಿ ಕಾಲವ ಕಳೆವರನುಚಿತದಿ ।
ಜಪತಪವನರಿಯದಲೆ ದೈವದ
ಕೃಪೆಯ ಪಡೆದವರುಂಟು ಬಾಳಿನ
ಚಪಲವಿಲ್ಲದ ದೈವಸೂಚಕ ಕರ್ಮಶ್ರದ್ಧೆಯಲಿ ॥ ೧೮೩

ಮಡದಿಯೊಬ್ಬಳು ಬೇಕು ಮಕ್ಕಳ
ಪಡೆದು ಸಲಹಲ್ಕೆಂದುಕೊಂಡರೆ
ಪೊಡವಿಯಲಿ ಸಹಬಾಳ್ವೆ ಸತಿಯೊಡನೆಂತು ರಂಜಿಪುದು ।
ಕಡಲ ಮಧ್ಯದಿ ಕಮಲದಂದದೊ
ಳಡಗಿರುವ ಸಂಸಾರ ಸಾಗರ
ದೊಡಲ ಕ್ಷೀರವ ಸವಿದರದು ದಾಂಪತ್ಯ ಪರಮಾರ್ಥ ॥ ೧೮೪

ಪಾರಮಾರ್ಥದಪಾರ ತೊಡರಿನ
ಸಾರವನು ವಿಸ್ತರಿಸಲದು ನಿ
ಸ್ಸಾರವಾಗಲು ತನ್ನೊಳಗೆ ತಾನರಿವುದದು ಲೇಸು ।
ಮೀರಿದತಿ ಸುಜ್ಞಾನ ನಿನ್ನೊಳು
ಸಾರುತಿದೆ ಸರ್ವಾರ್ಥವನು ನಿನ
ಗಾರು ಸರಿಸಮರಿಲ್ಲ ಜ್ಞಾನದೊಳೆಂದ ನಾರದನು ॥ ೧೮೫

ಎಂದು ಹೇಳಿದ ನಾರದನ ನುಡಿ
ಯಿಂದ ಪುಳಕಿತನಾದ ಚಿತ್ತದಿ
ವಂದಿಸುತಲಾಕಾಶರಾಜನು ಮುನಿಯೊಳಿಂತೆಂದ ।
ಇಂದು ಮನದ ವಿಕಾರವನು ನೀ
ಕುಂದಿಸಿದೆ ನಿಜದೈವಮುನಿ ನೀ
ಬಂದ ಕಾಲವಿದೆಂತು ಸುಕೃತವೆಂದು ಕೈ ಮುಗಿದ ॥ ೧೮೬

ಸಾಮದಲಿ ಸಂತೈಸಿ ಮುನಿಯನು
ನೇಮದಿಂ ಬೀಳ್ಕೊಟ್ಟು ತನ್ನ ವಿ
ರಾಮದಲಿ ದೆಸೆಗೊಂಡ ರಾಜಕುಟುಂಬ ಪರಿಜನವ ।
ಸೋಮಧರ ಸತಿಹಿತನು ನಮ್ಮಯ
ಪ್ರೇಮ ಕುವರಿಯ ವರಿಸಲಿದು ಶ್ರೀ
ರಾಮ ಕೃಪೆಯುಂದಲ್ಲಿ ಹಿಗ್ಗಿದರೆಲ್ಲ ಪರಿಜನರು ॥ ೧೮೭

ಒಂದು ದಿನ ಮೃಗಬೇಟೆಯಾಡಲು
ಮಂದಹಾಸದಿ ಶ್ರೀಹರಿಯು ತಾ
ನೊಂದು ವಿಪಿನಕೆ ಬಂದು ತುರುಗವನೇರಿ ಹರುಷದಲಿ ।
ಹಂದಿ ಮೊದಲಾದೆಲ್ಲ ಮೃಗಗಳ
ಕೊಂದು ಸರಳಿನೊಳಲ್ಲಿ ಬರುತಿರ
ಲೊಂದು ಮದಗಜವೆದುರು ಕಾಣದೆ ಮುಂದೆ ಸಾಗುತಿರೆ ॥ ೧೮೮

ಕರಿಯು ಹರಿ ಬೆನ್ನಟ್ಟಿ ಬರಲದು
ತಿರುತಿರುಗಿ ಕಾಡಿನೊಳು ಕಡೆಯಲಿ
ಕರೆದು ತಂದಿತು ವನಕೆ ಪದ್ಮಾವತಿಯ ಸಂದಣಿಗೆ ।
ತರುಣಿಯರೊಳೊಡನಾಡುತಿರೆ ಪದ
ಕರಿಗೆ ಬೆದರಿದ ಯುವತಿಗಳ್ಗೆಯು
ಹರಿಯು ಹೆದರದಿರೆನ್ನುತಭಯವ ಕೊಟ್ಟನಾ ಕ್ಷಣದಿ ॥ ೧೮೯

ಅಟ್ಟಿಬಂದಾನೆಯನು ಶರಗಳ
ಬಿಟ್ಟುದೂಡಿದ ಬಹಳ ದೂರಕೆ
ದಿಟ್ಟಿಸುತ ಹೆಂಗಳೆಯರೆಲ್ಲರು ನೋಡುತಿರುವಂತೆ ।
ಗಟ್ಟಿಗನು ದಿಟವಾರೊ ತಿಳಿಯೆನು
ಮೊಟ್ಟಮೊದಲಿದನರಿಯ ಬೇಕೆಂ
ದಿಟ್ಟ ಕಂಗಳ ದೃಷ್ಟಿ ಕಲಕದೆ ನೋಡುತಿರಲವರು ॥ ೧೯೦

ಭೀತಿಯಲಿ ಬೆದರಿದ್ದ ಹೆಂಗಳ
ಕಾತರವ ಬಿಡಿಸಲ್ಕೆ ಶ್ರೀಹರಿ
ಯಾತು ಕೊಂಡದನಟ್ಟಿದನು ಮದಗಜವ ನಿಮಿಷದಲಿ ।
ಮಾತುಗಳು ಮತ್ತಿಲ್ಲದಾಕೆಯ
ಪ್ರೀತಿಯಿಂದೆವೆಯಿಕ್ಕದಲೆ ಮನ
ಸೋತು ನೋಡುತ ನಿಂದ ಮನದುಂಕ್ಕಳಿಸಿ ಚೆಲುವಿನಲಿ ॥ ೧೯೧

ಸುದತಿಯರ ಸುಳಿವಿನಲಿ ಬಳುಕುವ
ಚದುರೆಯನು ದಿಟ್ಟಿಸುತ ಮನದಲಿ
ಮದನಯುತ ಕಳೆಯಿದ್ದ ಲಕ್ಷ್ಮಿಯು ಕಂಡ ತವಕದಲಿ ।
ಕುದುರೆಯಿಂದಿಳಿದಲ್ಲಿ ಸಖಿಯರ
ಬದಿಯೊಳವನೈತಂದು ತಿಳಿಯಲು
ಮುದದಿ ಪೇಳಿದರವರು ಪದ್ಮಾವತಿಯು ಪೆಸರೆಂದು ॥ ೧೯೨

ಯುವತಿಯಿರುವ ವಿಳಾಸವೆಲ್ಲವ
ನವಧರಿಸಿ ಮುರವೈರಿ ಬೆಸಸಿದ
ನವಯುಗದ ಸಿರಿವನಿತೆಯವಳನ ವರಿಸಬೇಕೆಂದು ।
ಕುವರಿ ನಾಚಿಕೆಯಿಂದ ನೆಲದಲಿ
ವಿವರಿಸಿದಳವಳಿಂಗಿತವ ಪರ
ಶಿವನ ಪ್ರೇರಣೆಗಾರು ವಂಚಿತರೆಂದು ವಿನಯದಲಿ ॥ ೧೯೩

ಬಳಿಕ ಸಖಿಯರನೊಲಿದು ಕೇಳಲು
ತಿಳುಹಲವ ವೃತ್ತಾಂತವೆಲ್ಲವ
ನಳಿನನಾಭನು ವರಿಸುವನು ತಾನೆಂದನೀಕೆಯನು ।
ಕಲುಷ ಚಿಂತಕ ನಿನ್ನ ಗೋತ್ರದ
ನೆಲೆಯನರಿಯದೆ ವರಿಸುವುದು ಬಹು
ಸುಲಭವಲ್ಲೆಂದೊಡೆಯಲಾತನ ಹಯವ ಕಲ್ಲಿನಲಿ ॥ ೧೯೪

ಹೊಡೆತದಲಿ ಹಯ ನೀಗುತಸುವನು
ಪೊಡವಿಯಲಿ ದೊಪ್ಪೆಂದು ಬೀಳಲು
ಕಡುಕರುಣಿ ಬಹು ಚಿಂತೆಯಲಿ ಹೊರವಂಟ ಕಾನನವ ।
ಒಡೆಯನಶ್ವದ ಹಾನಿಯಲಿ ಭಯ
ತೊಡರಿ ಮೂರ್ಛಿತಳಾಗಿ ಬಿದ್ದಾ
ಒಡತಿಯನು ಸಂತೈಸಿ ಸಖಿಯರು ಕೊಂಡರರಮನೆಗೆ ॥ ೧೯೫

ಪರಮ ಪುರುಷನ ಕಂಡ ಮನಸಿನ
ಹರುಷ ಪುಟಿಗೈದಿತ್ತು ನಿಮಿಷದಿ
ಸರಸಿಜಾಂಬಕಿ ಕಂಡ ಪುರುಷನನಗಲಿ ತಾಪದಲಿ ।
ಕರಗುತಿರ್ದಳು ನಿತ್ಯನಿಯಮವ
ತೊರೆದು ಪದ್ಮಾವತಿಯು ಶ್ರೀಹರಿ
ಮರಳಿ ಬರುವುದಕಾಂಬೆನೆಂದೆಂದೆನುತ ಚಿಂತೆಯಲಿ ॥ ೧೯೬

ರೂಪಿನಲಿ ಬಹು ಚಲುವನಾತನ
ರೂಪದತಿಶಯ ರೂಪದರ್ಶನ
ಕೋಪದಲಿ ಕಳಕೊಂಡೆನಾತನನೆಂದು ದರ್ಶಿಪೆನೊ ।
ಆ ಪರಾತ್ಪರ ಮೂರ್ತಿಯೇ ನಿಜ
ರೂಪದಲಿ ದೊರೆತಿದ್ದನೆನ್ನುತ
ಲೀಪರಿಯ ಸಂತಾಪದಲಿ ಕರಗುತ್ತಲಿರೆ ಯುವತಿ ॥ ೧೯೭

ದಿನದಿನಕೆ ತನು ಕರಗಿ ಚಿಂತೆಗೆ
ವನಿತೆ ತಾ ವಶಳಾಗಲವಳಿಗೆ
ಕನಸಿನಲಿ ಕಂಡಂತೆ ರೂಪವನೆದ್ದು ಬೆರಗಾಗಿ ।
ಕನಕ ವಸ್ತ್ರಾಭರಣವೆಲ್ಲವ
ಮನಸಿನಲಿ ಮರೆತಂತೆ ಬಳಲುತ
ದಿನದಿನಕೆ ತನು ಕರಗುತಿರ್ದಳು ಮದನ ಚಿಂತೆಯಲಿ ॥ ೧೯೮

ಕಳೆದು ದೊರಕುವುದುಂಟೆ ಚಲುವನು
ತಿಳಿಯಲರಿಯೆ ಭವಿಷ್ಯವೇನೆಂ
ದಳಲುತಿರ್ದಳು ಪದುಮ ತಾ ದಿನಗಳೆಯಲೆಂತೆಂದು ।
ಉಲಿದ ಶಬ್ದಕೆ ಕಿವಿಯನೊಡ್ಡುತ
ಪುಳಕಿಸುತಲಡಿಗಡಿಗೆ ಮನದಲಿ
ನೆಲೆಯ ಕಾಣದೆ ಬಳಲುತಿರ್ದಳು ಬಾಲೆ ಬಸವಳಿದು ॥ ೧೯೯

ಮನಸಿಜಾತನ ತಾಪವದು ತಾ
ನನವರತ ಕಾಡುತಲಿ ಪದುಮಳ
ಮನಕೆ ಮಂಕಾವರಿಸಿ ಮರೆತಳು ಸಕಲ ಸಿಂಗರವ ।
ಯನಗೆ ದೊರಕಿದ ದೈವರೂಪಿನ
ತನುವ ಕಳೆದನವರತ ಚಿಂತಿಸ
ಲೆನಿತು ಕಾಣುವುದುಂಟೆಯನ್ನಯ ಪ್ರೀತಿ ಬಿಂಬವನು ॥ ೨೦೦

ಇತ್ತ ಪದುಮಳ ಕಂಡು ತಿರುಗಿದ
ಚಿತ್ರಜನಕನು ಮನದಿ ಬಹು ನೆನೆ
ಯುತ್ತ ಯುವತಿಯ ಚೆಲುವ ರೂಪಿನ ಮಮತೆಯಾವರಿಸಿ ।
ಉತ್ತಮೋತ್ತಮ ಸುಂದರಿಯ ನೆನೆ
ಯುತ್ತ ಮನ ಮಂಕಾಗಿ ವನಿತೆಯ
ಚಿತ್ರದಲಿ ವರ್ಣಿಸುತಲೀತೆರ ಬರುತಲಿಹ ನವ ॥ ೨೦೧

ಕಾಮಿನಿಯ ರೂಪಿನಲಿ ಸೊಬಗಿನ
ಕಾಮನೇ ಮೈದುಂಬಿ ಕಾಣ್ಬನೊ
ಸೋಮನರಸಿಯ ಚೆಲುವಮೀರ್ದಳೊ ಪದುಮ ರೂಪಿನಲಿ ।
ಪ್ರೇಮವೆಗ್ಗಳಿಕೆಯಲಿ ಹಿಗ್ಗಿದ
ಕಾಮ ಬಾಲೆಯ ನೋಟವಾವರಿಸಿ
ರೋಮ ಪುಳಕಿತನಾಗಿ ಸಾಗುತಲಿರ್ದ ದಾರಿಯಲಿ । ೨೦೨

ಕುಸುಮ ನೇತ್ರೆಯ ಕೂಡದಿರಲಿ
ನ್ನುಸಿರು ಸಾಗುವುದೆನಿತು ಕಾಣೆನು
ಬಿಸಜಮುಖಿ ಪದ್ಮಾವತಿಯ ತನು ಸೋಂಕದಿಲ್ಲದಲೆ ।
ಅಸಮ ಸಾಹಸ ವೀರರಾದರು
ಕುಸುಮಶರ ಸಂತಾಪದಲಿ ಮನ
ಬೆಸುಗೆಯರಿಯದ ಕಾಮಪೀಡಿತನಾಗಿ ಚಿಂತಿಸುತ । ೨೦೩

ಮೂರು ಲೋಕದ ಕರ್ತನಾದರು
ದಾರಿಯರಿಯದೆ ಮನದಿ ಸುಂದರ
ನಾರಿಗೋಸುಗ ತನ್ನ ತನುವನು ಕುಂದಿಸುತ ದಿನದಿ ।
ಆರ ಕುವರಿಯೊ ಪದುಮನಾಭನ
ನೀರಜಾಕ್ಷಿಯದೆಂತು ಕಳೆದಳೊ
ಮಾರಪಿತ ಮನವನ್ನು ತಿಳಿಯನು ದೇವ ತನ್ನೊಳಗೆ । ೨೦೪

ಕೂಗಿದರೆ ದನಿಕೇಳ್ವಳೋ ಮಿಗೆ
ಕೂಗದಿರಲವಳೆನಿತು ನೆನವಳೊ
ಪೋಗಲೆಂತವಳಲ್ಲಿಗೆನ್ನುತ ಮನದ ಬೇಗೆಯಲಿ ।
ನೀಗಿ ಭೋಜನ ಪಾನಗಳ ತನು
ಭೋಗದಂಕುರಿತಾಗ್ನಿಯಲಿ ಬೆಳ
ಗಾಗುತಿರ್ದುದ ನೆನೆದು ನೋಯುತಲಿರ್ದ ಮದನಪಿತ ॥ ೨೦

ನೋಡಿ ಬಂದಾ ಸುಂದರಿಯು ತನು
ಜೋಡಿಯನು ನೆನನೆನೆದು ಮನದಲಿ
ರೂಢಿಯಲಿ ವಾನನರಿಯ ನಿಂತಿಹ ಬೆಡಗಿನಂದವನು ।
ಕೂಡುವುದು ನಾನೆಂತು ವನಿತೆಯ
ಬೇಡಿಕೊಂಡನು ಶಿವನ ಕರುಣೆಯ
ಜೋಡಿಸಲು ನಮ್ಮೀರ್ವರನು ದಿನಗಳೆವುದಕೆ ಮೊದಲು ॥ ೨೦೭

ಮನದಲಿ ಬೇರೂರಿದಾ ಚೆಲು
ವನಿತೆಯೆಂತಿಹಳೆನುತ ಮರೆಯದೆ
ಕನಸ ಕಂಡಾತುರದಿ ಹಿಡಿಯುತಲಿರ್ಪನು ಬೆಡಗ ।
ಕನವರಿಸಿ ಕಣ್ದೆರೆದು ನೋಡಲು
ವನಿತೆ ಕಾಣದೆ ಮೋಹವಡರಿದ
ತನುವಪೂರಕ ತಾಗಿ ಬಳಲುತಲಿರ್ದ ಶ್ರೀಹರಿಯು ॥ ೨೦೮

ನಸುನಗುತ ತನ್ನೆದುರು ಕಂಡಾ
ಕುಸುಮದಳಲೋಚನೆಯ ಮನದಲಿ
ವಸದು ಕಾಣುತಲಿರ್ದನಾಕೆಯನಪ್ಪಿಗಂದದಲಿ ।
ಶಶಿವದನೆ ಪದುಮಾಕ್ಷನು ಕಾಣದೆ
ವಸುಧೆಯೊಳು ನಾನೆಂತು ಬದುಕಲಿ
ಶಶಿಧರನೆ ಕಾಪಾಡಬೇಕೆಂದಳಲುತಿರ್ದನವ ॥ ೨೦೯

ದೊರೆವಳೋ ಮೇಣವನಿಯೊಳು
ಮರೆತನ್ನ ಕಾಣದೆ ಕೂಡಿ ಪರರನು
ಮೆರೆವಳೋ ನಾನೆನಿತು ಚೇಮಿಸಲವಳ ಕೂಡದಲೆ ।
ಪರಿಪರಿಯ ಚಿಂತಿಸುತಲೀತೆರ
ಪರಶಿವನಿಗೊಪ್ಪಿಸುತ ತನ್ನಯ
ಪರಮ ಚಿಂತೆಯ ತಾನು ನಡೆದನರಣ್ಯಮಧ್ಯದಲಿ । ೨೦೯

ದೇವದೇವನು ಬಂದು ಬಕುಳಾ
ದೇವಿ ನೆಲೆಯ ಕುಟೀರದಲಿ ನಿ
ರ್ಜೀವನಂದದಿ ಪವಳಿಸಿದ್ದನು ಕವಿದ ಚಿಂತೆಯಲಿ ।
ಆವ ಷಡುರಸ ಭೋಜನಂಗಳ
ಭಾವನೆಯ ಮನ ತೊರೆದು ಮತ್ತ
ನ್ನ್ಯವತೆರದುಪಚಾರಗಳ ಮರುಮಾತನಾಡದಲೆ ॥ ೨೧೦

ಶ್ರೀರಮಣ ಕಳೆಗುಂದಿ ಚಿಂತಿಪ
ಕಾರಣವದೇನೆಂದು ತಿಳಿಯಲು
ನಾರಿ ಬಕುಳಾದೇವಿ ಬೆಸಗೊಂಡವನ ಮನ್ನಿಸಲು ।
ಕ್ಷೀರವಾರಿಧಿಶಯನ ಮನವನು
ಸೂರೆಗೊಂಡಾ ಯುವತಿಯನು ಮನ
ಸಾರೆ ತಾ ಕೊಂಡಾಡಿ ಬಕುಳಾದೇವಿಗಿಂತೆಂದ ॥ ೨೧೧

ಇಂದು ವನದಲಿ ಬೇಟೆಯಾಡಲು
ಬಂದೆನಲ್ಲಿಯೆ ಕಂಡು ಯುವತಿಯ
ಚಂದ ಚಲುವಿಗೆ ಸೋತೆ ಪದ್ಮಾವತಿಯ ರೂಪಿನಲಿ ।
ಸುಂದರಾಂಗಿಯು ಬಯಸಿ ತವಕದಿ
ಬಂದೆನಿಲ್ಲಿಗೆ ಮುಂದೆ ನೀನಿದ
ಕೊಂದುಪಾಯವನರುಹಿ ಸಫಲವ ನಡೆಸಬೇಕೆಂದ । ೨೧೨

ಮೂರು ಲೋಕಕೆ ಮುಖ್ಯ ನಿನ್ನನ
ದಾರು ವರಿಸದೆ ಬಿಡುವರದಿರಲಿ
ನಾರಿ ಪದ್ಮಾವತಿಯು ಸಾಟಿಯು ದೇವ ನಿನಗೆಂದು ।
ನೀರಜಾಕ್ಷಿಯು ನುಡಿಯೆ ಹಿಂದಿನ
ಸಾರಮಯ ಸಂಬಂಧವನು ಹರಿ
ಸಾರಿದನು ನಿಜಮಾತೆ ಬಕುಳಾದೇವಿಗಿಂತೆಂದು ॥ ೨೦೩

ಮಹಿಮ ಮೂರುತಿ ತನ್ನ ಮನಸಿನ
ಗಹನವೇನೆಂದಲ್ಲಿ ಕೇಳಲು
ಸಹಿಸಲಾರದ ವೇದನೆಯ ವಿಸ್ತರಿಸಿದನು ದೇವ ।
ಸಹಜದಲಿ ನಾನಿಂದು ಕಂಡೆನು
ಮಹಿಪಸುತೆಯೋರ್ವಳನು ಮನವಿದು
ದಹಿಸುತಿದೆ ಮಧುಚಂದ್ರ ತವಕದೊಳೆಂದನಾ ಹರಿಯು ॥ ೨೦೪

ಭೂರಮಣ ನಿನ್ನಂತರಂಗವ
ಸೂರೆಗೊಂಡಾ ಯುವತಿ ಮರ್ತ್ಯರ
ನಾರಿಯೋ ಸುರವನಿತೆಯೋ ಮೇಣಸುರಬಾಲಕಿಯೋ ।
ಕ್ಷೀರಸಾಗರ ಶಯನನೊಳು ಸಂ
ಸಾರಿಯೆನಿಸುವ ಘನಶಿರೋಮಣಿ
ಯಾರು ವಿವರಿಪುದೆಂದು ಬಕುಳಾದೇವಿ ಬೆಸಗೊಳಲು ॥ ೨೦೫

ಹಿಂದೆ ನಾರಾಯಣನ ವರಿಸಿದೆ
ನೆಂದು ವೇದಾವತಿಯು ಹೇಳಲು
ಮಂದಮತಿ ದಶಶಿರನು ತನ್ನನೆ ಕೂಡಬೇಕೆಂದು ।
ಮಂದಗಮನೆಗೆ ದುಡುಕಲಾತನ
ನಂದು ಶಪಿಸಿದಳಾಕೆ ಹೆಣ್ಣಿನ
ಬಂಧನವೆ ನಿನಗಂತ್ಯವಾಗಲಿ ಮುಂದೆ ತಿಳಿಯೆಂದು ॥ ೨೦೬

ಶಾಪವಿತ್ತು ಸುಂದರಿಯು ಸಂ
ತಾಪದಲಿ ಕಂಗೆಟ್ಟು ಚಿತೆಯಲಿ
ಪಾಪಿ ಸೌಂದರ್ಯವನು ಕಳೆಯಲು ಧುಮುಕಲಗ್ನಿಯಲಿ ।
ತಾಪಸೋತ್ತಮನನಲ ದೇವನು
ತಾಪವಡಗಿಸಿಕೊಂಡು ಸಾಧ್ವಿಯ
ರೂಪು ಕೆಡದಿರುವಂತೆ ತನ್ನಯ ಗೃಹದೊಳಿಟ್ಟಿರಲು ॥ ೨೧೭

ಹಿಂದೆ ದಶಶಿರ ಪೃಥ್ವಿಜೆಯ ತಾ
ಬಂಧನದಿ ಕದ್ದೊಯ್ವ ಸಮಯದೊ
ಳೊಂದುಪಾಯವನೆಸಗಲಗ್ನಿಯು ಬಂದನಡ್ಡೈಸಿ ।
ತಂದು ವೇದಾವತಿಯ ದುರುಳನ
ಮುಂದೆ ನಿಲ್ಲಿಸಿ ಜನಕಸುತೆಯಿವ
ಳೆಂದು ನಂಬಿಸಿಕೊಟ್ಟು ನಿಜಜಾನಕಿಯ ಕರೆತಂದು ॥ ೨೧೮

ಅರಸಿ ಸ್ವಾಹಾದೇವಿಯೊಳು ಬಿ
ತ್ತರಿಸಿ ವೃತ್ತಾಂತವನು ತನ್ನ
ಲ್ಲಿರಿಸಿ ಸೇವಿಸುತಿರ್ದರನುದಿನ ಜನಕಜಾತೆಯನು ।
ತರುಣಿ ವೇದಾವತಿಯು ಲಂಕಾ
ಪುರದೊಳಿದ್ದವಳೆಂದು ಶ್ರೀಹರಿ
ಮೆರೆದ ಬಹುಳಾದೇವಿಯೆದುರಲಿ ನಡೆದ ಸಂಗತಿಯ ॥ ೨೧೯

ರಾವಣಾಂತ್ಯದಿ ರಾಮ ತನ್ನ ಸ
ಜೀವ ಜ್ಯೋತಿಯೊಳಿಳುಕೆ ಮನದಲಿ
ಭಾವಜನ ನಿಜಮಾತೆಯಗ್ನಿಯೊಳಿದ್ದು ಬಂದಿರಲು ।
ದೇವಶ್ರೇಷ್ಠನು ಭೂಮಿಜೆಯ ಸ
ದ್ಭಾವದಲಿ ತಂದೊಪ್ಪಿಸಲು ಸಿರಿ
ದೇವಿಯುರಸನು ಕೂಡಿದನು ನಿಜಸತಿಯ ಸಂತಸದಿ ॥ ೨೨೦

ಇತ್ತ ವೇದಾವತಿಯು ತನ್ನನು
ಮತ್ತೆ ಕೂಡೆಂದಲ್ಲಿ ಬೇಡಲು
ಚಿತ್ತಜಜನಕನೊಪ್ಪದೀತೆರ ನುಡಿದನಾಕೆಯಲಿ ।
ಹತ್ತು ಜನ್ಮಕೆ ಶ್ರೇಷ್ಠ ರಾಮನಿ
ಗುತ್ತಮಳುಸತಿಯೋರ್ವಳಲ್ಲದೆ
ಮತ್ತೆ ಮಡದಿಯರಿಲ್ಲ ತನಗೆಂದಲ್ಲಿ ಬಿತ್ತರಿಸಿ ॥ ೨೨೧

ಸೀತೆ ವೇದಾವತಿಯರೀರ್ವರು
ಖ್ಯಾತಿಯಲಿ ಬಹುಶ್ರೇಷ್ಠರಿವರನು
ಪ್ರೀತಿಯಿಂ ಕೂಡೆಂದು ಹೇಳಿದನನಲ ರಾಮನಿಗೆ ।
ನೀತಿಯಲಿ ನಾನೇಕಪತ್ನಿ
ವ್ರಾತಿಯೆಂದನು ಬಳಿಕ ಕೂಡೆನು
ಮಾತು ತಪ್ಪೆನು ಮುಂದೆ ವರಿಸುವೆನೆಂದ ಶ್ರೀರಾಮ ॥ ೨೨೨

ರಾಮ ರಘುಕುಲಸೋಮ ಮುನಿಜನ
ಪ್ರೇಮಧುರನಿಸ್ಸೀಮ ಕರುಣಾ
ಧಾಮ ದುರುಳ ವಿರಾಮ ರಕ್ಕಸ ಭೀಮ ಶ್ರೀರಾಮ ।
ಕಾಮಜನ ನಿರ್ನಾಮ ಮಧುರಾ
ನಾಮ ಭಕ್ತಲಲಾಮ ಸೀತಾ
ರಾಮ ರಾಮೆಂದಕ್ಷಿಯನು ಬಿಗಿದಿಟ್ಟಿದಳು ಬಾಲೆ ॥ ೨೨೩

ಇನಿತುಕಾಲವು ನನ್ನ ಧ್ಯಾನದಿ
ವನಿತೆ ಕಳೆಯುತಲುದಿಸಿದಳು ಬಲು
ಘನತೆಯಿಂದಾಕಾಶರಾಜನ ಶ್ರೇಷ್ಠ ಗರ್ಭದಲಿ ।
ಮನಕೆ ತಾ ಬೇರೇನು ರುಚಿಸದು
ಎನಗೆ ಪದ್ಮಾವತಿಯ ಬಯಕೆಯು
ನೆನೆನೆನೆದು ಬೆಂಡಾದೆ ಬಕುಳಾದೇವಿ ಕೇಳಿಯೆಂದ ॥ ೨೨೪

ಮುಂದೆ ಪದ್ಮಾವತಿಯ ಮುದದಲಿ
ತಂದು ಮದುವೆಯ ಮಾಡುವುದು ನಿನ
ಗಿಂದು ಸೇರಿದ ಕಾರ್ಯ ಬಕುಳಾದೇವಿ ಕೇಳೆಂದ ।
ಮಂದಗಮನೆಯು ಮನದಲಭಿ
ವಂದಿಸುತ ಶ್ರೀಹರಿಯ ತವಕದಿ
ಬಂದಳವಳಾಕಾಶರಾಜನ ದಿವ್ಯಮಂದಿರಕೆ ॥ ೨೨೫

ಬರಲು ಪದ್ಮಾವತಿಯು ಸಖಿಯರು
ನೆರೆದು ಫಲಪುಷ್ಪಾದಿಗಳ ಬಲು
ಹರುಷದಲಿ ತಾವೆದುರುಗೊಂಡರು ಬಕುಳದೇವಿಯನು ।
ಧರಣಿದೇವಿಯು ಕಂಡು ಬಕುಳೆಯ
ಕರೆದು ರಾಣೀವಾಸದಲಿ ತಾ
ವಿರಲು ಧರಣಿಪ ಬಂಧುವಿಗೆ ಬೆಸಗೊಂಡ ಕುಶಲವನು ॥ ೨೨೬

ದೇವಿ ನಿನ್ನಯ ಬರುವಿಕೆಯ ನಾ
ಭಾವಿಸಿದೆ ಪಿರಿದೆಂದು ತಮ್ಮನ
ದಾವ ಕಾರ್ಯವು ಸೆಳೆದುದಿತ್ತಲು ಪೇಳಿ ನೀವೆಂದು ।
ತೀವಿದತಿ ಸಂತಸದಿ ಬಕುಳಾ
ದೇವಿ ನಿನ್ನಯ ಕುವರಿ ಪದ್ಮಾ
ದೇವಿಯನು ಶ್ರೀರಮಣ ಬಯಸಿದನೆನಲು ಹರುಷದಲಿ ॥ ೨೨೭

ವಾರಿಜೋದರ ನಿಮ್ಮ ಕುವರಿಯ
ಮೀರಿದತಿ ಚೆಲ್ವಿನಲಿ ಸೋತಿಹ
ಪಾರುವಾಡೆಂದಾಕೆ ಬೆಸಗೊಳೆ ದೊರೆಯು ಹಿಗ್ಗಿನಲಿ ।
ಕ್ಷೀರವಾರಿಧಿಶಯನ ಬಯಕೆಯ
ದಾರು ಬೇಡೆಂದವರು ನಮಗಿದ
ಪಾರ ಪುಣ್ಯವಿದೆಂದು ಕರೆಸಿದ ಕುವರಿ ಜಾತಕವ ॥ ೨೨೮

ಕರಸಿ ರಾಜ ಬೃಹಸ್ಪತಿಯುನಾ
ದರಿಸಿ ಪದ್ಮಾವತಿಗೆ ಪುಣ್ಯಾದಿ
ದೊರೆತಿಹನು ಶ್ರೀ ವೆಂಕಟೇಶ್ವರ ಪೂರ್ವ ಪುಣ್ಯಫಲ ।
ಪರಿಣಯಕೆ ಲಗ್ನವನು ನಿಯಮಿಸೆ
ಕರೆಸಿದನು ಪೇಳಿಸಲು ಗುರುವರ
ಹರುಷದಲಿ ನಿಶ್ಚಯವ ಕೊಟ್ಟನು ರಾಜದಂಪತಿಗೆ ॥ ೨೨೯

ಕುಶಲ ಸಂಭಾಷಣೆಯೊಳಿವರಿರೆ
ವಸುಧೆಸುತೆ ವರ ವೆಂಕಟೇಶ್ವರ
ನೆಸೆವ ಕೊರವಂಜಿಗನ ರೂಪವ ಧರಿಸಿ ಪುರದೊಳಗೆ ।
ಅಸಮ ಕಣಿ ಹೇಳುತಲಿ ಬರುತಿರೆ
ಬಿಸಜಮುಖಿಯರು ನೋಡುತವನನು
ಗುಸುಗುಸನೆ ಬೆಸಗೊಂಡು ಕೇಳುತಲಿರ್ದರಾ ಕಣಿಯ ॥ ೨೩೦

ಮನ್ನೆಯರಸರ ಮನ್ನಣೆಯ ಕಣಿ
ಕನ್ನೆಯರ ಮನಸೆಳೆಯುವಾ ಕಣಿ
ತನ್ನಭೀಷ್ಟವ ಗೆಲುವ ಸರಪಣಿ ಕೇಳಿರೆನ್ನ ಕಣಿ ।
ಚನ್ನಿಗನ ಗುಣವರ್ಣನೆಯ ಕಣಿ
ಪೊನ್ನನಿತ್ತರೆ ವಿವರಿಸುವಾ ಕಣಿ
ಬನ್ನ ಬಿಡಿಸುವ ಚಿಂತಯಾಗಣಿ ಕೇಳಿರೆನ್ನ ಕಣಿ ॥ ೨೩೧

ಹಿಂದೆ ನಡೆದುದ ಹೇಳುವುದು ಕಣಿ
ಮುಂದೆ ಬರುವುದಕೆಂದರೀ ಕಣಿ
ಬಂದು ಕೇಳಿರಿ ಪೇಳುವೆನು ಕಣಿ ಮನದ ಮರ್ಮಮಣಿ ।
ಸುಂದರಿಗೆ ಶುಭಮಂಗಳದ ಕಣಿ
ಯಿಂದ ನಲ್ಲರ ಗೆಲ್ಲುವುದು ಕಣಿ
ಇಂದುಮುಖಿಗರವಿಂದನಾಭನು ಸಂಧಿಸಿರುವ ಕಣಿ ॥ ೨೩೨

ನಂಬಿದವರಿಷ್ಟಾರ್ಥವೀ ಕಣೆ
ನಂಬದಿರೆ ನೀರಸದ ಕಣೆಯಿದ
ನಂಬಿಕೆಟ್ಟವರಿಲ್ಲ ಬನ್ನಿರಿ ಕೇಳಲೀ ಕಣೆಯ ।
ನಂಬಿದವರಂಬಿಗನ ಕಣೆಯಿದ
ರಿಂಬನರಿಯಲು ಕೇಳಿರೀ ಕಣೆ
ಜಂಬವಲ್ಲಿದು ಕೇಳಿ ಮಮತಾಮಣಿಗಳಿಷ್ಟದಲಿ ॥ ೨೩೩

ಕೇಳಿ ಬಂದರೆ ಪೇಳುವೆನು ಕಣಿ
ನಾಳಿನಲಿ ಶ್ರೀಲೋಲನಿಗೆ ಕಣಿ
ಹೇಳಿ ಕರೆದಿಹನೆಂದನಸುರಧ್ವಂಸಿ ನಸುನಗುತ ।
ಬಾಲೆ ಪದ್ಮಾವತಿಯ ಸಖಿಯರು
ಕೇಳಿ ಕೊರವಂಜಿಯನು ಕರೆದೊ
ಯ್ದೇಳಿದರು ತಮ್ಮೊಡತಿಯೊಡನಿದಿರೆಲ್ಲ ವಿವರವನು ॥ ೨೩೪

ನೋಡಿದಳು ಕೊರವಂಜಿ ತನ್ನಯ
ಜೋಡಿಯನು ಕಿರುಗಣ್ಣಿನಲಿ ಬರ
ಮಾಡಿದಳು ತನ್ನಕ್ತ್ರಿಯನು ಮನದನುವ ತಿಳಿಯಲ್ಕೆ ।
ಕಾಡದಿರು ಕೊರವಂಜಿ ನಿಜವನು
ನೋಡಿ ಪೇಳಲು ರಾಣಿ ನಿನ್ನಯ
ಬೇಡಿಕೆಗೆ ಎಂಗಿಲಾಗಿ ಸಲಿಸುವರೆಂದಳೋರ್ವ ಸಖಿ ॥ ೨೩೫

ದಿಟ್ಟಸುತಲುಡುರಾಜವದನೆಯು
ಪಟ್ಟವನು ಹೂಡುತ್ತ ಕೈಯನು
ಮುಟ್ಟಿ ನೋಡಿದಳಸ್ತ್ರರೇಖೆಯನರಿತ ಮತಿಯಂತೆ ।
ಗಟ್ಟಿಗಳು ಮಧು ಯುವತಿಯುವಳಿಗೆ
ನೆಟ್ಟಿಹುದು ಮನಸೋರ್ವ ವರನಲಿ
ದಿಟ್ಟಿರುವುದತಿ ಕಷ್ಟವೆಂದಳು ನಗುತ ಕೊರವಂಜಿ ॥ ೨೩೬

ಶ್ರೀರಮಣ ನೀ ಕನ್ಯೆಯನು ಘನ
ಸಾರ ಮೆಚ್ಚಿದನೆನಲು ಕೊಟ್ಟಳು
ಭಾರಿ ಸಿರಿಶೃಂಗಾರದೊಡವೆಯ ರಾಣಿ ಸಂತಸದಿ ।
ಕ್ಷೀರವಾರಿಧಿಶಯನ ಧರೆಗವ
ಹಾರವಿತ್ತಿಹನೆಂದು ಕೇಳಿದ
ನೀರೆಯರು ಮನತುಂಬಿ ನಲಿವರು ಬಾಷ್ಪಧಾರೆಯಲಿ ॥ ೨೩೭

ಅಂಜದಿರಿ ಹುಸಿಯಲ್ಲವೀ ಕೊರ
ವಂಜಿ ನುಡಿದುದ ಪದ್ಮೆಗೆ ಪತಿ
ಕಂಜಸಂಭವ ಪಿತನು ನಂಬಿರಿ ಹೊಂಟೆ ತಾನೆನಲು ।
ಸಂಜೆಯಾಯಿತು ಕಳುಹಿಸಲು ಕೊರ
ವಂಜಿಯನು ಸಂತುಷ್ಟಿಯಲಿ ನಡೆ
ದಂಜನಾಸುತನೊಡೆಯ ಬಂದನು ದೇವಿಯಾಶ್ರಮಕೆ ॥ ೨೩೮

ದೊರೆಯು ತಮ್ಮನ ತೊಂಡಮಾನನ
ಕರೆದು ಕಳುಹಿದ ಶುಕ ಬೃಹಸ್ಪತಿ
ಯರನು ಶೀಘ್ರದಿ ಕರೆತರಲು ನಿಶ್ಚಯಿಸೆ ಲಗ್ನವನು ।
ಗುರುವರರ ಸಮ್ಮುಖದಿ ಸೇರಿದ
ಪರಮಮಿತ್ರ ಪವಿತ್ರರೆಲ್ಲರು
ವರನ ಕಾಂಬಲಿಕೆ ಲಗ್ನವ ಶುಭದಿ ನಿಶ್ಚಯಿಸೆ ॥ ೨೩೯

ತಿಳುಹಿ ಬಕುಳಾದೇವಿಗೆಲ್ಲವ
ಕಳುಹಿದರು ಪತ್ರವನು ಶುಕರಲಿ
ಸಲಿಸಲದ ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಗೆ ।
ಚಲುವಮೂರ್ತಿಯು ಕಂಡು ಮುನಿವರ
ಬಳಿಯಲಿದ್ದಲಾ ಲಗ್ನಪತ್ರವ
ನೊಲಿದು ಸಮ್ಮತಿಯಿತ್ತು ಕಳುಹಿದ ಶುಕರದೊರೆಯೆಡೆಗೆ ॥ ೨೪೦

ಮಾರಜನಕನು ಬಂದು ಬಹುಳಾ
ನಾರಿಯನು ಬೆಸಗೊಂಡು ಲಗ್ನ ವಿ
ಚಾರ ಸಾಂಗೋಪಾಂಗದಲಿ ಬಹುಧನವ ಹಾರೈಸಿ ।
ಶ್ರೀರಮಣ ಧ್ಯಾನಿಸಲು ತವಕದಿ
ಸೇರಿದರು ಗೌರೀಶ ಬ್ರಹ್ಮರು
ಮೂರು ಕೋಟಿ ಸಹಸ್ರದೇವಾದ್ಯಖಿಳ ಸುರನರರು ॥ ೨೪೧

ಶ್ರೀನಿವಾಸ ವಿವಾಹವಾಗಲು
ಸಾನುರಾಗದಿ ನಡೆಯಲೆಲ್ಲವು
ತಾನು ಬಯಸಿದ ಧನವದಿಲ್ಲದೆ ದೇವ ಚಿಂತಿಸುತ ।
ದಾನವಾರಿಗು ಧನದ ಬವಣೆಯು
ತಾನು ತಪ್ಪದದೆಂದರುಳಿದವ
ರೇನು ಮಾಡಲು ಸಾಧ್ಯವೆಂಬುದನರಿತರದು ಸೊಬಗು ॥ ೨೪೨

ಧನವದಿಲ್ಲದ ಕಾರ್ಯ ನಡೆಯದು
ಧನವೆ ಸರ್ವಶ್ರೇಷ್ಠ ಜಗದಲಿ
ಧನ ವಿಹೀನನದಾರು ಗಣಿಸುವರಿಹಪರಂಗಳಲಿ ।
ಧನಿಕನೇ ಬಲುದೈವವೆಲ್ಲಕೆ
ಧನಿಕ ತಾನಧಿಪತಿಯು ಲೋಕಕೆ
ಧನಿಕನೆಲ್ಲವ ಗಳಿಸಬಲ್ಲನು ತನ್ನ ಧನಬಲದಿ ॥ ೨೪೩

ಹಣವು ಬೇಕೆಲ್ಲರಿಗೆ ಸರ್ವಕೆ
ಹಣವ ಬಯಸುವರೆಲ್ಲ ಸರ್ವಕೆ
ಹಣವೆ ಸಕಲಕೆ ಶ್ರೇಷ್ಠ ಧರೆಯಲಿ ತಿಳಿಯಬೇಕಿದನು ।
ಹಣವದಿಲ್ಲದ ಮೇಲೆ ಜನಗಳು
ಹೆಣಕು ಕಡೆಯಾಗವನ ಕಾಣ್ವರು
ಹಣವನುಳ್ಳವನಾವನಾದರು ಸಕಲಮತಿಯುತನು ॥ ೨೪೪

ಸೋಃಕೋಃಶ್ರೀ

ಸಿರಿಯನುಳ್ಳ ಕುರೂಪಿ ಚೆಲುವನು
ಸಿರಿಯನುಳ್ಳ ವಿರಾಗಿಯೇ ಧಣಿ
ಸಿರಿಯು ಸೇರಲು ರಾಜ್ಯವಾಳುವ ತನ್ನ ಸಿರಿಬಲದಿ ।
ಸಿರಿಯನುಳ್ಳವ ಗೌರವಾನ್ವಿತ
ಸಿರಿಯಸಂಪದಿ ಸರ್ವಮಾನ್ಯನು
ಸಿರಿಯದಿಲ್ಲದ ಶಿವನ ಗಣಿಸರು ಜನರು ಲೋಕದಲಿ ॥ ೨೪೫

ಪರಿಪರಿಯ ಯೋಚಿಸಿದ ಕಡೆಯಲಿ
ಪರಮಪುರುಷನ ಹೊರಗೆ ಗಂಗಾ
ಧರನು ಕರೆಸೆ ಕುಬೇರನನು ಪಡೆಯಲ್ಕೆ ಸಾಲವನು ।
ಹರಿಯ ಬೇಡಿಕೆಗೊಪ್ಪಿ ಧನಪತಿ
ತರಿಸಿಕೊಡುವೆನು ದ್ರವ್ಯವನು ನೀ
ಕರುಣಿಸಲು ಬೇಕದಕೆ ಬಡ್ಡಿಯನೆಂದ ನಿಯಮದಲಿ ॥ ೨೪೬

ಒಪ್ಪಿದನು ಕಲಿಯುಗದ ಹರಿಯಂ
ತೊಪ್ಪಿಸಲು ಬಡ್ಡಿಯನು ಸಾಲಕೆ
ತಪ್ಪದಲೆ ಶ್ರೀ ವೆಂಕಟೇಶನು ಧನಿಕ ರಾಜನಿಗೆ ।
ತಪ್ಪದಲೆ ಕಲಿಯುಗದ ಕಡೆಯೊಳ
ಗೊಪ್ಪಿಸುವೆ ನೀನಿತ್ತ ಧನವನು
ತಪ್ಪಲಾರೆನು ಬ್ರಹ್ಮರುದ್ರರೆ ಸಾಕ್ಷಿಯಿದಕೆಂದ ॥ ೨೪೭

ಕೇಶವನಿಗೆ ಕುಬೇರ ಹೊನ್ನಿನ
ರಾಶಿಗಳ ಬಹುಸುರಿದು ವಧುವಿನ
ಭೂಷಣಕೆ ಸರಿಯಪ್ಪ ವಿವಿಧಾಭರಣ ವಸ್ತ್ರಗಳ ।
ಘಾಸಿಗೊಳ್ಳದೆ ಕೊಟ್ಟ ತನ್ನಯ
ಕೋಶದೊಳು ಹುದುಗಿದ್ದ ದ್ರವ್ಯವ
ದೇಸು ಪರಿಯಂತರವು ಲೆಕ್ಕದೊಳೆಣಿಕೆಗಳವಲ್ಲ ॥ ೨೪೮

ಧನದ ಬಡ್ಡಿಗೆ ವೆಂಕಟೇಶ್ವರ
ನನುದಿನವು ಕೈಯೊಡ್ಡಿ ಕೇಳಲು
ಜನಗಳನು ಬರಮಾಡಿಕೊಳ್ಳುತಲಿರುವ ಸನ್ನಿಧಿಗೆ ।
ದಿನದಿನಕೆ ಭಕ್ತಾದಿಗಳು ಬಲು
ಧನವ ಕೊಂಡೊಯ್ಯುತ್ತಲಿರುವರು
ವನಜನಾಭನ ಲಗ್ನ ಸಾಲವ ತೀರಿಸಲ್ಕೆಂದು ॥ ೨೫೯

ಹಣವ ಕಲಿಯುಗದಂತ್ಯದಲಿ ನಿಜ
ಧಣಿಗೆ ಕೊಡುವುದಕೊಪ್ಪಿ ಪತ್ರಕೆ
ಫಣಿಶಯನ ಸಹಿಗೈದನಜಹರ ಸಾಕ್ಷಿಯಿದಕೆಂದು ।
ಎಣಿಸಲಾಗದ ದ್ರವ್ಯರಾಶಿಗೆ
ತಣಿದು ಸುರನರರೆಲ್ಲ ಹಿಗ್ಗುತ
ಲೆಣೆಯೆ ಸಿರಿಯರಸಂಗೆ ಸಿರಿತನಕೆಂದು ಪೇಳಿದರು ॥ ೨೬೦

ಇಂದುಧರ ಕಂದರ್ಪನಗ್ರಜ
ಮುಂದೆ ಬಕುಳಾದೇವಿಯರುಗಳು
ಬಂದರವರು ವರಾಹ ಪರ್ವತದಿಂದ ವಧುಪುರಕೆ ।
ಇಂದ್ರ ಮೊದಲಾದಖಿಳ ಸುರನರ
ರಂದು ನರಯಣಪುರಿಗೆ ಧಾವಿಸಿ
ಬಂದು ಬೆರೆತರು ಕಿನ್ನರೋರಗರೆಲ್ಲ ಸಂಭ್ರಮದಿ ॥ ೨೬೦

ಸೇರಿದರು ಸುರರೆಲ್ಲ ತಮ್ಮಯ
ನಾರಿಯರ ಜೊತೆಗೂಡಿ ಸುರನರ
ಬೇರೆಯಿಲ್ಲೆಂಬಂತೆ ಭೂಲೋಕದಲಿ ನವಪುರಿಗೆ ।
ನಾರಿ ಭೂರಮೆ ನಲಿದು ಸುರಶೃಂ
ಗಾರವರ್ಧನೆಯೆನಿಸಿ ನಿಜಗಂ
ಭೀರದಲಿ ಬಿಗಿದಪ್ಪಿದಳು ಸುರಕೋಟಿ ಮನತಣಿಸಿ ॥ ೨೬೨

ವಸುಧೆಯಲಿ ವೈಕುಂಠಪತಿ ತಾ
ನೊಸೆದು ಪದ್ಮಾವತಿಯ ವರಿಸುವ
ಕುಶಲ ವಾರ್ತೆಗೆ ಬಂದು ಸೇರಿದರಪಾರ ಪರಿವಾರ ।
ವಸುಧೆಪತಿಯಾಕಾಶರಾಜನು
ಕುಶಲದಿಂ ಸ್ವಾಗತಿಸುತೆಲ್ಲರ
ಕುಸುಮ ಗಂಧಾರ್ಚನೆಯೊಳುಚಿತಾಸನದಿಸತ್ಕರಿಸಿ ॥ ೨೫೩

ಪರಿಪರಿಯ ಸಂಭ್ರಮದೊಳಮರರು
ಬೆರೆತು ನರರೊಳುನೋಳ್ಪ ಜನರಿಗೆ
ನರರ ಲೋಕವು ದೇವಲೋಕಕೆ ಮಿಗಿಲದೆನಿಸಿತ್ತು ।
ಧರಿಸಿ ಪೀತಾಂಬರವ ವರನಿಗೆ
ಸರಸಿಜಾಕ್ಷಿಗೆ ತೊಡಿಸಿ ವಿವಿಧಾ
ಭರಣ ಜರತಾರಿಗಳನುಡಿಸುತ ಸಿಂಗರಿಸಿ ವಧುವ ॥ ೨೫೪

ವೇದ ಮೊಳಗಿದ ಮಂತ್ರಗಳಿಗೆ ವಿ
ವಾದವಿಲ್ಲದ ಶಾಸ್ತ್ರಗಳು ಸವಿ
ನಾದಮಯ ಮಂಗಳದ ವಾದ್ಯದಗೋಷ್ಠಿ ಮಧ್ಯದಲಿ ।
ವೇದಪುರುಷನು ಪದುಮಾವತಿಯನು
ಮೋದದಿಂ ವರಿಸಿದನು ನೆರೆದಿಹ
ಮೇದಿನಿಯ ಸುರನರರುಘೇ ಎಂದೆನಲು ಹರ್ಷದಲಿ ॥ ೨೫೫

ಮಂಗಳಾರತಿಯೆತ್ತಿ ಬೆಳಗಿದ
ರಂಗಜನಪಿತ ಶ್ರೀನಿವಾಸನು
ಗಂಗನಾಂಗನೆಯರೆಲ್ಲ ಪದ್ಮಾವತಿಗೆ ಶುಭಮತಿಗೆ ।
ಮಂಗಳಂ ಜಯಮಂಗಳಂ ಶುಭ
ಮಂಗಳಂ ರತಿಪತಿಯ ಪಿತನಿಗೆ
ಮಂಗಳಂ ಶ್ರೀರಂಗನರಸಿಗೆ ಪದ್ಮಪೀಠೆಗೆ ॥ ೨೫೬

ಕಂಕಣಾಂತ್ಯದ ಯಜ್ಞಹೋಮವ
ವೆಂಕಟೇಶ್ವರ ಪದ್ಮಾವತಿಗೆ ಕ
ಳಂಕವಿಲ್ಲದೆ ನಡೆಸಿದರು ಶುಕ ಬೃಹಸ್ಪತಿಯರು ।
ವೆಂಕಟೇಶ ವಿವಾಹವಾಗಲು
ಪಂಕಜೋದರನರಸಿ ಲಕ್ಷ್ಮಿಯು
ಸಂಕುಚಿತ ಭಾವದಲಿ ಕೊಲ್ಲಾಪುರಿಗೆ ಧಾವಿಸಲು ॥ ೨೫೭

ಹರುಷದಲಿ ಮಧುಚಂದ್ರದಾಟಕೆ
ಹರಿಯು ನವವಧುಗೂಡಿ ಬಂದನು
ಚರಿಸುತಾಗಸ್ತ್ಯಾಶ್ರಮದಿ ಸುಖಶಾಂತಿಯಿಂದಿರಲು ।
ಪರಮ ಪುರುಷೋತ್ತಮನ ಚರಣದೊ
ಳೆರಗಿ ಮುನಿವರನಿರಲು ಬೇಡಿದ
ವೊರೆಗೆ ಮನ್ನಣೆಯಿತ್ತು ಕಾಲವ ಕಳೆಯುತಲ್ಲಿರಲು ॥ ೨೫೮

ನೋಡಿ ದಣಿಯರು ನವವಧೂವರ
ರಾಡಿ ದಣಿಯರು ವಿವಿಧ ಕೇಳಿಯ
ಹಾಡಿ ದಣಿಯರು ಮದನಮೋಹನಲಂಗ ಗೀತೆಗಳ ।
ಕೂಡಿ ದಣಿಯರು ವಿವಿಧ ಭಂಗಿಯೊ
ಳಾಡಿ ದಣಿಯರು ಹಿರಿಮೆಗಳ ಮು
ದ್ದಾಡಿ ದಣಿಯರು ಮದನಪಿತ ಮಾತೆಯರು ನಿತ್ಯದಲಿ ॥ ೨೫೯

ಇರುತಲಿರಲಾಕಾಶ ರಾಜನು
ತೊರೆಯಲಸುವನು ಕಾಲಗತಿಯಲಿ
ದೊರೆತನಕೆ ತನ್ನನುಜತನುಜರು ಕಾದುವುದ ಕಂಡು ।
ಮರುಳರಾದಿರಿ ಭವರ ನಿಮಗಿದು
ತರವೆ ಬೇಡೆಂದೆನುತ ಶ್ರೀಹರಿ
ಬರಲು ಬಿದ್ದನು ತೊಂಡಮಾನನ ಸರಳ ತಾಗಿನಲಿ ॥ ೨೬೦

ಹರಿಯು ಮೂರ್ಛಿತನಾಗಿ ಬೀಳಲು
ದೊರೆಯು ಮಗ ವಸುಧಾನನನು ಬಂ
ದೆರಗಿ ಚರಣಕೆ ಶೈತ್ಯದಿಂದುಪಚರಿಸಲೀರ್ವರನು ।
ಕರೆದು ಭಾಗವ ಮಾಡಿ ರಾಜ್ಯದ
ಸಿರಿಯನಿಬ್ಬರಿಗೊಹಿಸಿ ಕೊಟ್ಟನು
ಹರಿಯು ಸರ್ವರಿಗೊಪ್ಪುವಂತಹ ನ್ಯಾಯನೀತಿಯಲಿ ॥ ೨೬೧

ಶ್ರೀನಿವಾಸನಭೀಷ್ಟದಲಿ ಬಹು
ಮಾನನಿಧಿ ತೊಂಡಮಾನನು
ಶ್ರೀನಿವಾಸನು ಬಂದು ಶೇಷಾಚಲದಿ ನೆಲಸಲ್ಕೆ ।
ಮೌನಿವರರಿಚ್ಛೆಯಲಿ ಶ್ರೀಹರಿ
ಧ್ಯಾನಿಸುತ ವಾಲ್ಮೀಕವಿದ್ದೆಡೆ
ಸಾನುರಾಗದಿ ನಿರ್ಮಿಸಿದನಾನಂದ ನಿಲಯವನು ॥ ೨೬೨

ಒಂದು ದಿವಸದ ಶುಭ ಮುಹೂರ್ತದೊ
ಳಂದು ಸಾರಥಿಯಾಗಿ ಬ್ರಹ್ಮನು
ತಂದು ರಥದಲಿ ವೆಂಕಟೇಶ್ವರ ಪದ್ಮಾವತಿಯರನು ।
ಸುಂದರದ ಶ್ರೀ ವೆಂಕಟಾಚಲ
ಕಂದು ಸೇರಿದ ದಿವಿಜ ಮನುಜರ
ಮುಂದೆ ಗರ್ಭಾಸನದಿ ನೆಲೆಸಲು ಪ್ರಾರ್ಥಿಸುತ ಮುಂದೆ ॥ ೨೬೩

ಕಲಿಯುಗಾಂತ್ಯದವರೆಗೆ ಭಕ್ತರ
ನೊಲಿದು ಸಲಹುವುದೆಂಬ ನಿಯಮಕೆ
ನಳಿನನಾಭನು ವರದ ಹಸ್ತವನೆತ್ತಿ ಮನ್ನಿಸಲು ।
ನಲಿದು ಹರುಷಾಬ್ಧಿಯೊಳು ಮೀಯುತ
ಕಲಿಯುಗದಿ ನಿಜದೈವ ನೆಲಸಿದ
ನೆಲೆಗೆ ಕಾರಣ ಬ್ರಹ್ಮನೆಂದರು ದಿವಿಜ ಮಂಡಲಿಯು ॥ ೨೬೪

ಶ್ರೀನಿವಾಸನು ಭಾಗ್ಯಲಕ್ಷ್ಮಿಯ
ಸ್ಥಾನವರಿಯದೆ ಮನಸಿನಲಿ ಮುಂ
ದೇನು ಮಾಡುವುದೆಂದು ಸಾಲದ ಚಿಂತೆಯೊಂದಿರಲು ।
ಜ್ಞಾನಮತಿ ಪದ್ಮಾವತಿಯು ಕುಂ
ದೇನು ನಮ್ಮಯ ದೇವಿ ಲಕ್ಷ್ಮಿಯ
ನೀನು ಕರೆಸಲು ಕಳವಳವು ನಮಗಿಲ್ಲವೆಂದೆನಲು ॥ ೨೬೫

ಸತಿಯ ಸಲಹೆಗೆ ದೇವ ತಾ ಸ
ಮ್ಮತಿಸಿ ಧರಿಸುತ ಶಂಖಚಕ್ರವ
ಸತತ ಪೀತಾಂಬರವ ಖಗವಾಹನದಿ ಹೊರಬಂದು ।
ಮತಿವಿಕಳ ಕೊಲ್ಹಾಪುರದಿ ನಿಜ
ಸತಿಯ ಕಾಣದೆ ದೇವಲೋಕದೊ
ಳತಿಶಯದ ಸಾಸಿರದ ಪತ್ರದ ಕಮಲವನು ತರಿಸಿ ॥ ೨೬೬

ವಾಯುದೇವನು ತಂದ ಕಮಲವ
ತಾಯಿ ಪದ್ಮ ಸರೋವರದಿ ಸ
ರ್ವಾಯು ಸತ್ವನು ನೆಟ್ಟು ತೀರದಿ ತಪಕೆ ಕುಳಿತಿರಲು ।
ತೋಯಜಾಕ್ಷನ ತಪಕೆ ಲಕ್ಷ್ಮಿಯು
ತೋಯಜೋದ್ಭವಳಾಗಿ ತೋರಲು
ತಾಯನರಸುತ ಬಂದ ಭೃಗುಮುನಿ ಬ್ರಹ್ಮಹರರೊಡನೆ ॥ ೨೬೭

ಮಾತೆ ಮುನಿಸಂಜಾತೆ ಮೂಜಗ
ಧಾತೆ ವರವಿಖ್ಯಾತೆ ಸುರ ಸಂ
ಪ್ರೀತೆಯುನ್ನನು ಕ್ಷಮಿಸು ಬೇಡುವೆನೆನುತ ಮುನಿವರನು ।
ಪ್ರೀತಿಯಿಂ ಪ್ರಾರ್ಥಿಸಲು ಭಕ್ತರೊ
ಳೀತ ಮುಂದಿಹನೆಂದು ಮನ್ನಿಸಿ
ನೀತಿಯುತ ನೀನಾಗು ಹೋಗೆಂದರುಹಿದಳು ಲಕುಮಿ ॥ ೨೬೮

ಶ್ರೀನಿವಾಸನ ಕಂಡು ಮನದಲಿ
ಧ್ಯಾನಿಸುತ ಪದಕೆರಗಿ ಲಕ್ಷ್ಮಿಯು
ತಾನು ಬ್ರಹ್ಮಮಹೇಶರೆಲ್ಲರ ಪ್ರಾರ್ಥನೆಗೆ ಮಣಿದು ।
ಜ್ಞಾನಿ ಮೌನಿಗಳೊಡನೆ ಸರ್ವರು
ಸಾನುರಾಗದಿ ಪದ್ಮಸರಸಿಯ
ಸ್ನಾನದಿಂದಾನಂದ ನಿಲಯಕೆ ಬಂದರರುಪದಲಿ ॥ ೨೬೯

ದೇವ ಬಂದಾನಂದ ನಿಲಯದಿ
ದೇವ ಬ್ರಹ್ಮನಖಂಡ ಜ್ಯೋತಿಗ
ಳಾವ ಪರಿಯಂತರವು ಬೆಳಗಲು ಹಚ್ಚಿ ನಿಯಮದಲಿ ।
ಕಾವನೆಲ್ಲವ ಕಲಿಯುಗದ ನಿಜ
ಪಾವನನು ಶ್ರೀ ವೆಂಕಟೇಶ್ವರ
ಜೀವಕೋಟಿಗೆ ಶ್ರೇಷ್ಠನೆಂದನು ಬ್ರಹ್ಮ ಕಲಿಯುಗಕೆ ॥ ೨೭೦

ನೋಡಿ ಕಮಲಜ ಶ್ರೀನಿವಾಸನ
ಬೇಡಲಪ್ಪಣೆಯಿತ್ತನುತ್ಸವ
ಮಾಡಲುಚಿತದಿ ಸರ್ವಕಲ್ಯಾಣಾರ್ಥ ಸಾಧನೆಗೆ ।
ನೀಡಿದಭಯಕೆ ಬ್ರಹ್ಮ ಸಕಲರ
ಬೇಡಿಕೆಯ ಕರುಣಿಸಲು ಕೊಂ
ಡಾಡಿದನು ಶ್ರೀವೆಂಕಟೇಶ್ವರನಭಯಃ ಹಸ್ತದಲಿ ॥ ೨೭೧

ತೊಂಡಮಾನನ ಕರೆದು ಬ್ರಹ್ಮನು
ಕೊಂಡುದಾರುತ್ಸವಕೆ ಸಕಲವ
ದಂಡುದಳ ನಿಜವಾಹನಂಗಳನೆನಲು ತಕ್ಷಣದಿ ।
ಮಂಡಲಾಧಿಪ ತಂದ ರಥದೊಳ
ಖಂಡ ಬ್ರಹ್ಮೋತ್ಸವವು ನಡೆಯಲು
ಮಂಡಲದಿ ಪೂರಾಯ್ತು ಬ್ರಹ್ಮೋತ್ಸವವು ಶ್ರೀಹರಿಗೆ ॥ ೨೭೨

ಪದುಮಳ ಕಂಡು ಲಕ್ಷ್ಮಿಯು
ಚಂಚಲಗೊಂಡು ನೀನಿ
ಣದಿ ಬಂದಿರುವೆಯೆನ್ನಲು ಪದ್ಮ ನಸುನಗುತ ।
ಜನಕಿತನರಸಿಯುಸು ನೀ
ಲವಳೆಂದೆನಲು ನಿನ್ನಯು
ಭ್ರಮಣೆಯು ಲಕ್ಷ್ಮಿ ನೀ ಕಣ್ತೆರದು ನೋಡೆನಲು ॥ ೨೭೩

ಗೇರಿದ ಸತಿಯುರೀರ್ವರ
ತನಕಂಚುಕಲಿ ಜರುಗುತ
ಶಿಲೆಯುಂತಲ್ಲಿ ಸರಿದನು ಹಿಂದಕೇಳಡಿಯು ।
ದರಸಿಯುರಿಬ್ಬರವರೊಳು
ನೆಂದೆನುತಲ್ಲಿ ದುಃಖಿವ
ಲಕ್ಷ್ಮಿಯು ಕೂಗಿ ಹರಿಯುನು ಕೇಳ್ದಳಿಂತೆಂದು ॥ ೨೭೪

ಯು ಹುಟ್ಟಿದ ವುಹಿಷಿ ನಾನಿರೆ
ಯು ಸರಿಸಮುದರಸಿಯೇನ್ನುವ
ಪೆಯುವಳಿವಳಾರು ಕಾಣೆನು ಸ್ವಾಮಿ ಪೇಳೆನಲು ।
ಯ ಕೇಳ್ನಿನ್ನಂಶ ಪದ್ಮಳು
ರೆತೆಯಾ ರಾಮಾವತಾರದ
ಣಿ ವೇದಾವತಿಯುನೆನ್ನಲು ಲಕ್ಷ್ಮಿ ಮನವರಿದು ॥ ೨೭೫

ದು ವಿಷಯದ ವಿವರವೆಲ್ಲವ
ಗೆ ಪದ್ಮಳ ಕರೆದು ಬಿಗಿದ
ಳದ ಪ್ರೀತಿಯೊಳೊಬ್ಬರೊಬ್ಬರ ತವ್ಮ ವುನದಣಿಯೆ ।
ಗೆಯುಲಿ ಪದ್ಮಾಕ್ಷಿ ಲಕ್ಷ್ಮಿಯು
ಳಿಸಿ ಪಾದಕೆ ವುಣಿಯುತಕ್ಕನ
ತನಕೆ ಮುದವಾಂತು ಕೂಡಿದರಿಬ್ಬರರುಷದಲಿ ॥ ೨೭೬

ಕಲಿಯುಗಾಂತ್ಯದವರೆಗೆ ಬಡ್ಡಿಯ
ಸಲಿಸಬೇಕು ಕುಬೇರನಿಗೆ ನಾ
ನೊಲಿದು ಪಡೆದ ವಿವಾಹ ಸಾಲದ ಮೊತ್ತಕನುಸರಿಸಿ ।
ತಿಳಿದು ನೀ ಭಕ್ತರಿಗೆ ವಿತ್ತವ
ನೊಲಿದು ಕೊಟ್ಟರೆ ಪಾಪವಡರಿಸಿ
ಸಲಿಸುವರು ಎನಗೊಂದು ಭಾಗವ ಪಾಪದೂಡಲಿಕೆ ॥ ೨೭೭

ಅಷ್ಟಭೋಗಕೆ ಮೂಲಧನವದ
ನೆಷ್ಟುಗಳಿಸಲು ಪಾಪಕಿಲ್ಲಿಹ
ವಷ್ಟು ತೊಡರುವದಧಿಕ ಮದದ ಜ್ಞಾನಸಂಪದಕೆ ।
ಸೃಷ್ಟಿಯೊಳಗತ್ಯಧಿಕ ಗಳಿಕೆಯು
ತುಷ್ಟಿಯಿಲ್ಲದ ಕಷ್ಟವೆಂಬುದ
ನೆಷ್ಟು ಜನ ತಿಳಿದಿಹರು ನೀ ಧನಲಕ್ಷ್ಮಿ ತೋರೆಂದ ॥ ೨೭೮

ಆಸೆ ಮೊದಲಂಕುರಿಸಿ ಮನದಲಿ
ಘಾಸಿಯಾದರು ಧನದ ಮೋಹಕೆ
ಮೋಸವದು ಬಹು ಸರಳವಾಗುವುದವರ ಬಾಳಿನಲಿ ।
ಲೇಸ ಕಾಣದೆ ಜನರು ಬಹುವಿಧ
ವೇಷದಿಂದಾರ್ಜಿಸಿದ ಧನವದು
ಪಾಶವಾಗುವುದವರ ಮನದಿಸ್ವಾರ್ಥ ಸಾಧನೆಗೆ ॥ ೨೭೯

ಸೃಜಿಸಿದಾತನ ಮರೆತು ಧನಿಕರು
ಸುಜನ ಕೋಟಿಯನಾಳಲವಣಿಸಿ
ವಿಜಯಿಯಾಗುವರವರ ನಡತೆಯುಕ್ಷಣಿಕ ವೃತ್ತಿಯಲಿ ।
ಕುಜನರೀ ಪರಿತೃಣಕೆ ಸಕಲವ
ತ್ಯಜಿಸಿ ಕರ್ಮದ ಭೀತಿಯಲಿ ಗಜ
ಭಜಿಸಿ ಮೊರೆಯುಂವರನಿಗೆ ತಿಳಿಯದನೆಂದ ವೆಂಕಟನು ॥ ೨೮೦

ನಿನ್ನ ಭಾಗ್ಯದಿ ಗಳಿಸಿ ಪಾವನ
ನನ್ನ ಮೊರೆವರು ಭೀತಿಗಳೆಯಲಿ
ಕಿನ್ನು ಕೊಡುತಲಿ ತಮ್ಮ ಗಳಿಕೆಯೊಳೊಂದು ಭಾಗವನು ।
ಮುನ್ನ ನೀನಿದನರಿತು ಭಕ್ತರಿ
ಗಿನ್ನು ಕೊಡು ಹೋಗೆಂದ ರಮಣನೊ
ಳಿನ್ನು ಮರುಮಾತಾಡದೊಪ್ಪಿದಳದಕೆ ವರಲಕ್ಷ್ಮಿ ॥ ೨೮೧

ಕಲಿಯುಗಾಂತ್ಯದವರೆಗೆ ಬಡ್ಡಿಯ
ಸಲಿಸಿ ಕಡೆಯೊಳಗಿರಿಸಿ ಮೊತ್ತವ
ನಲವಿನಿಂ ವೈಕುಂಠವಾಸಕೆ ತೆರಳಬಹುದೆಂದು ।
ಛಲದ ಮದದಿಂದೊದೆದ ನನ್ನಯ
ಫಲಕೆ ಭೃಗು ತಾ ಖಿನ್ನನಾಗಲು
ಮಲಿನಗೊಳಿದಿಹ ಎನ್ನ ವಕ್ಷಸ್ಥಳವ ಧರಿಸೆನಲು ॥ ೨೮೨

ಸಿರಿಯು ವಕ್ಷಸ್ಥಳವ ಸೇರಲು
ಬೆರೆತಳಿದವಂಕದಲಿ ಪದ್ಮಳು
ಹರಿಯು ಲಕ್ಷ್ಮಿಯ ಧರಿಸಿ ನುಡಿದನು ಮುಂದಿನಾ ಪರಿಯ ।
ಮೆರವ ಪದ್ಮಸರೋವರದೊಳಿ
ನ್ನಿರುವದೊಂದಂಶದಲಿ ಭಕ್ತರ
ವರದೆ ನೀನಾಗೆಂದು ಲಕ್ಷ್ಮಿಗೆ ನಿಯಮಿಸುತ ಹರಿಯು ॥ ೨೮೩

ನಾನು ದಿನಪ್ರತಿ ಮಧ್ಯರಾತ್ರಿಗೆ
ಸಾನುರಾಗದಿ ನಿನ್ನ ಭವನಕೆ
ಜ್ಞಾನಿ ನೀನರಿವಂತೆ ಬರುವೆನು ಮನವ ಮುದಗೊಳಿಸಿ ।
ಶ್ರೀನಿವಾಸನು ತಿಳಿಸಲೀಪರಿ
ಧ್ಯಾನದಿಂದಲವೇಲು ಮಂಗಳೆ
ಸ್ಥಾನದಲಿ ಶಿಲೆಯಾಗಿ ನಿಂತಳು ಲಕ್ಷ್ಮಿ ಭಕ್ತರಿಗೆ ॥ ೨೮೪

ಅಪರಿಮಿತ ಗಳಿಕೆಯಲಿ ಭಕ್ತರು
ಚಪಲಚಿತ್ತದಿ ಶಾಂತಿಯರಿಯದೆ
ವಿಪುಲ ಧನಕನಕಾಭರಣಗಳ ಹೊತ್ತು ಸನ್ನಿಧಿಗೆ ।
ಸುಫಲ ಬುದ್ಧಿಗೆ ಭಕ್ತಕೋಟಿಯು
ಕಟುಸಂಕಲಿ ನುಡಿ ವೆಂಕಟೇಶನ
ಕೃಪೆಗೆ ಸಾಗುವರಿನಿತು ಕೋಟಿಯು ನಿತ್ಯಪರಿಯಂತ । ೨೮೫

ವನವಿಹಾರಕೆ ಶ್ರೀನಿವಾಸನು
ವನಿತೆ ಪದ್ಮಾವತಿಯಳೊಂದಿಗೆ
ವನಕೆ ಪೋದವ ಬಾರದಿರಲದ ಕಂಡು ಮತಿವಂತೆ ।
ತನಯ ಶ್ರೀ ಗೋವಿಂದರಾಜನ
ನನುಸರಿಸುತಾನಂದ ನಿಲಯದ
ಸನಿಹದಲಿ ಬಂದಲ್ಲಿ ಶಿಲೆಯಾಗಿದ್ದುದನು ಕಂಡು । ೨೮೬

ಮಗನೆ ಬಹುಗುಣಯುತನೆ ಬಾ ಕಲಿ
ಯುಗದ ಧರ್ಮೋದ್ಧಾರ ಬಾ ನಿ
ನ್ನಗಲಿ ನಾನಿರಲಾರೆನೆಂದಳ್ಳೊರಲೆ ವಿಧವಿಧದಿ ।
ಯುಗದಿ ಬಕುಳಾಮಾತೆ ನಿನ್ನಯ
ಮಗನು ಮುಕ್ತಿಯನೀವೆ ಬಾರೆ
ನ್ನಗಲು ತುಳಸಿ ಮಾಲೆಯಾಗೆಂದಾಲಿದ ಶಬ್ದದಲಿ । ೨೮೭

ಮಾತೆ ವೈ ಮರೆತಂತೆ ದೇವನ
ಪ್ರೀತಿಗೊಪ್ಪುವ ಕಂಠದಲಿ ವಿ
ಖ್ಯಾತ ತುಳಸಿಮಾಲೆಯಾದಳು ಶ್ರೀನಿವಾಸನಿಗೆ ।
ಈ ತೆರದಿ ದಿನನಿತ್ಯ ಪೂಜೆಗೆ
ಮಾತೆ ತುಳಸಿಹಾರವಿದು ಬಹು
ಪ್ರೀತಿಯಾಯಿತು ವೆಂಕಟೇಶನಿಗೆ ನಿತ್ಯಪೂಜೆಯಲಿ । ೨೮೮

ಸಿರಿವನಿತೆಯಲುಮೇಲು ಮಂಗಾ
ಪುರದಿ ನೆಲಸಿಹಳಲ್ಲಿ ಭಕ್ತರ
ಮೊರೆಗೆ ಸಿರಿಯಾಗಿಹಳು ತನ್ನಯ ವರದ ಹಸ್ತದಲಿ ।
ಕರುಣಿಸುತ ಸೌಭಾಗ್ಯ ಸಂಪದ
ಸಿರಿಯಭೀಷ್ಟವನೆಲ್ಲ ತನ್ನಯ
ದರುಶನವ ಪಡೆದೆಲ್ಲ ಜನರಿಗೆ ನಿತ್ಯಪರಿಯಂತ ॥ ೩೦೫

ಧನಕೆ ನೀ ಧನಲಕ್ಷ್ಮಿ ಕೋರಿದ
ಜನಕೆ ವರಸಂತಾನಲಕ್ಷ್ಮಿಯು
ನೆನೆದವರುಗಳ ಧಾನ್ಯಲಕ್ಷ್ಮಿಯು ಸರ್ವಮಂಗಳೆಯು ।
ವಿನಯ ಸಂಪನ್ನರಿಗೆ ವಿದ್ಯಾ
ವನಿತೆ ಭಯದಲಿ ಧೈರ್ಯ ಲಕ್ಷ್ಮಿಯು
ಕನಿಕರಿಸಿ ನೀಡುತ್ತಲಿರುವಳು ನೆನೆದ ಸಂಪದವ ॥ ೩೦೬

ಬಡತನವು ಬಂದಡರೆ ಭಕ್ತರು
ಕಡಲಜಾತೆಯ ನೆನೆಯಲವರಿಗೆ
ಕೊಡುತಲಿರುವಳು ಸರ್ವಭಾಗ್ಯಗಳರಿಸಿ ಗಜಲಕ್ಷ್ಮಿ ।
ಕಡುಕರುಣಿ ಕಮಲಾಕ್ಷಿ ಧರೆಯೊಳು
ಸಡಗರದ ಸೌಭಾಗ್ಯ ಸಂಪದ
ಕೊಡತಿಯಾಗಿಹಳಲ್ಲಿ ಮಂಗಾಪುರದ ತಾಣದಲಿ ॥ ೩೦೭

ಕಮಲನಾಭನ ಸತಿಯು ಕರದಲಿ
ಕಮಲಶೋಭಿತ ವರದ ಹಸ್ತಳೆ
ಕಮಲನೇತ್ರೆಯು ಕನಕಮಯ ಸಂಪನ್ನ ಶೋಭಿತೆಯು ।
ಕಮಲಪೀಠಳೆ ಹರಿಯುವರಹೃ
ತ್ಕಮಲ ವಾಸಿನಿ ನೆನೆವ ಮನುಜರ
ಕಮಲ ವರದಾರಾಧ್ಯೆ ಬೇಡುವೆ ನೀಡು ಸಂಪದವ ॥ ೩೦೮

ಅಜನೆ ಮೊದಲಾದಖಿಳ ಸುರನರ
ಸುಜನ ಕೋಟಿಯು ನಿತ್ಯ ನಿನ್ನನು
ಭಜಿಸುತಿರುವರು ಕನಿಕರಿಸಿ ನಿಜವರದಳಾಗೆನುತ ।
ಭಜಕರಘ ನಿರ್ಮೂಲದಾತೆಯೆ
ಭಜಿಸುವೆನು ನಾನಿನ್ನ ಕರುಣದಿ
ವಿಜಯ ಮಾಲೆಯನಿತ್ತು ಸಲಹೆಂದೆನ್ನನೆಡೆಬಿಡದೆ ॥ ೨೦೯

ಪಂಕಜೋದ್ಭವ ಮಾತೆ ಸುರನುತೆ
ಪಂಕಜೋದರನರಸಿ ಪರಿಮಳ
ಕುಂಕುಮಾಂಕಿತೆ ಕುಸುಮ ಪೂಜಿತೆ ನಿತ್ಯ ವರಲಕ್ಷ್ಮಿ ।
ವೆಂಕಟೇಶನ ಭಕ್ತರಿಗೆ ನಿ
ಶ್ಶಂಕೆಯಲಿ ನೀ ವರದ ಹಸ್ತವ
ನಂಕುರಿಸಿ ಕಾಪಾಡು ಬೇಡುವೆ ನಿನ್ನನನುದಿನದಿ ॥ ೨೧೦

## 2ನೇ ಭಾಗ ಮಹಾತ್ಮ ಹಾತಿರಾಂ ಭಾವಾಜಿ

ಹತ್ತಿರಾಂ ಭಾವಾಜಿಯೆಂಬುವ
ಭಕ್ತನೋರ್ವನು ತಿರುಪತಿಗೆ ತಾ
ನುತ್ತರದ ಕಡೆಯಿಂದ ಬಂದಾಶ್ರಮವನನುಗೊಳಿಸಿ ।
ಇತ್ತ ಸ್ವಾಮಿಯ ಧ್ಯಾನದಲಿ ಕಳೆ
ಯುತ್ತ ಕಾಲವ ಪಗಡೆಯಾಟ ದೊ
ಳೆತ್ತಿದಾಳವ ದೇವರಾಟವಿದೆಂದು ಪೇಳುತಲಿ ॥ ೩೧೧

ತನ್ನ ಪಗರಿನೊಳೊಂದು ದೇವರಿ
ಗಿನ್ನು ಮೊದಲೆಂದವನು ತಾನೇ
ತನ್ನ ಚಿತ್ತದ ತೆರದಿ ಪಗಡೆಯನಾಡುತಲ್ಲಿರಲು ।
ತನ್ನೊಡನೆ ತಾ ದೇವರಾಟವ
ಮುನ್ನ ಪಾಡುತಲಿರಲು ಜನರಿವ
ನನ್ನು ಖಿಳಸನ್ಯಾಸಿಯೆನ್ನುವ ತೆರದಿ ನೋಡುತಿರೆ ॥ ೩೧೨

ಒಂದು ದಿನವಾಶ್ರಮದ ಹೊರಗಡೆ
ಯಿಂದ ಮಿಂಚಿನ ಶಬ್ದವಾಗಲು
ಬಂದು ನಿಜ ಭಾವಾಜಿ ಹೊರಗಡೆ ನೋಡಲಚ್ಚರಿಯು ।
ಸಂಧಿಸುತ ನಿಜದೈವ ಮಂಗಳ
ದೊಂದು ರೂಪವ ಮನದ ಹಿಗ್ಗಿನೊ
ಳಂದು ಪೊಗಳಿದ ವೆಂಕಟೇಶನ ತನ್ನ ಮನದಣಿಯೆ ॥ ೩೧೩

ಶ್ರೀನಿವಾಸನು ಪಗಡೆಯಾಟವ
ತಾನು ಭಾವಾಜಿಯೊಡನಾಡಲು
ಸ್ಥಾನವೀವಾಶ್ರಮದೊಳಾಯಿತು ಭಕ್ತಪಾಲಕಗೆ ।
ಜ್ಞಾನನಿಧಿ ಭಾವಾಜಿ ಭಕ್ತಗೆ
ಶ್ರೀನಿವಾಸನು ಹಿಗ್ಗಿದಾಟದೊ
ಳೇನು ಹೇಳಲಿ ಸ್ವಾಮಿ ಸೋತಿಹೆಂದ ಭಕ್ತನೊಳು ॥ ೩೧೪

ಭಕ್ತ ನೀ ಗೆದ್ದಿರುವೆ ಪಂದ್ಯದ
ಯುಕ್ತಿಯಲಿ ಮಿಗಿಲಿಲ್ಲ ನಿನ್ನಯ
ಶಕ್ತಿಯಿದನಾ ಮೆಚ್ಚಿ ಕೊಡುವೆನು ವರವ ಕೇಳೆನಲು ।
ಭಕ್ತ ಬಾಲಾಜಿಯನು ನೋಡುತ
ಮುಕ್ತಿ ಮಾರ್ಗಕೆ ವಿಶ್ವರೂಪವ
ಭಕ್ತನಿಗೆ ನೀ ಕರುಣಿಸಲು ಬೇಕೆಂದು ಬೇಡಿದನು ॥ ೩೧೫

ಬೇಡಿಕೆಯ ಮನ್ನಿಸಿದ ದೇವನು
ನೋಡಿ ತಣಿಯಲು ವಿಶ್ವರೂಪವ
ನೀಡಿ ಭಕ್ತನೊಳಿಂತು ಹೇಳಿದ ತನ್ನ ನಿಜಗುಣವ ।
ಬೇಡದಲೆ ಜನರಾವ ಫಲವನು
ಮಾಡಲುಚಿತದಿ ನನ್ನ ಪೂಜೆಯ
ನೋಡಲವ ಬಹು ಪ್ರೀತಿಯೆನಗೆಂದೇಳಿದನು ದೇವ ॥ ೩೧೬

ಸೋಕೋಶ್ರೀ

ಭಾವಶುದ್ಧಿಯೊಳಾಗ ಭಕ್ತನು
ದೇವದೇವನ ವಿಶ್ವರೂಪದ
ಜೀವಿತವ ತಾ ನೋಡಿ ಕರಗಳ ಜೋಡಿಸುತ ನಿಂತು ।
ಆವ ಜನ್ಮದ ಪುಣ್ಯ ಫಲಿಸಿತಿ
ದಾವ ಶಕ್ತಿಯ ದಿವ್ಯರೂಪವೊ
ದೇವ ನೀನೆನಗಿತ್ತ ದರುಶನವೆಂದು ನಲಿನಲಿದು ॥ ೩೧೭

ವಿಶ್ವರೂಪನೆ ವಿಶ್ವದಾತನೆ
ವಿಶ್ವತೋಮುಖ ವಿಶ್ವಕರ್ಮನೆ
ವಿಶ್ವವ್ಯಾಪಕ ವಿಶ್ವದೋಧರ ವಿಶ್ವಸರ್ವಸ್ವ ।
ವಿಶ್ವನಾಟಕ ವಿಶ್ವಮೋಹಕ
ವಿಶ್ವಮಯ ವಿಶ್ವೇಶ ನಿನ್ನಯ
ವಿಶ್ವಮಂಗಳ ದಿವ್ಯ ದರುಶನ ವಿಶ್ವಭಾಗ್ಯವತ ॥ ೩೧೮

ಸರ್ವಜನ ಜನ್ಯ ಸರ್ವಕೆ
ಸರ್ವಚೇತನ ಸಾರ್ವಭೌಮನೆ
ಸರ್ವಫಲ ಸರ್ವೇಷ್ಟದಾಯಕ ಸರ್ವಗುಣಸದನ ।
ಸರ್ವಮಂಗಳ ಸರ್ವರಕ್ಷಕ
ಸರ್ವಕಾಲದ ಸರ್ವಶ್ರೇಷ್ಠನೆ
ಸರ್ವಜನ್ಮದ ಪುಣ್ಯಫಲವೆಂದೆರಗಿ ಭಾವಜಿಯು ॥ ೩೧೯

ಮಂಗಳಾಂಗನೆ ಮದನಜನಕ
ನ್ಮಂಗಗಳ ದರುಶನವೆಯುನ್ನಯ
ಕಂಗಳಿಗೆ ಬಹುರಮ್ಯ ದೇವನೆ ನಿನ್ನ ರೂಪಮಯು ।
ರಂಗಮಯ ನಿನ್ನಂಗ ನಯನಕೆ
ರಂಗನೀಡಿತದೆನಗೆ ನಿಮಿಷದಿ
ತಿಂಗಳಿಗೆ ನೀನೊಮ್ಮೆ ದರುಶನವೀಯ ಬೇಕೆಂದ ॥ ೩೨೦

ವೆಂಕಟೇಶನ ಭಕ್ತಿಯಿದು ಮನ
ಕಂಕರಿಸಲಾ ಜನ ಹೊತ್ತು ದ್ರವ್ಯವ
ಶಂಕೆಯಿಲ್ಲದೆ ಸುರಿಯುತಿರ್ದರು ಸ್ವಾಮಿ ಸನ್ನಿಧಿಗೆ ।
ವೆಂಕಟನ ಸಹಜಾತ ಶುಭ ನಾ
ಮಾಂಕಿತನು ಗೋವಿಂದರಾಜನು
ಅಂಕಗಣಿತ ದ್ರವ್ಯರಾಶಿಯನಳೆದು ಬೇಡಾಗಿ ॥ ೨೮೯

ಶ್ರೀನಿವಾಸನ ಬಳಿಗೆ ಬಂದವ
ತಾನು ಬಸವಳಿದಿಹೆನು ಮುಂದಿನ
ದೇನು ಹಾದಿಯೆಂದೆನಲು ತಿಳಿಸಿದನವನಿಗೀ ತೆರದಿ ।
ಜ್ಞಾನಿ ನಿನ್ನಯ ಕಂದ ಹಸ್ತದ
ದಾನ ಧರ್ಮೇಹಗಳ ಕಾರಣ
ನೀನು ರಾಶಿಯನಳೆಯೆ ಹೆಚ್ಚುವುದದಕೆ ನೀನಿನ್ನು ॥ ೨೯೦

ಬೆಟ್ಟದಡಿ ವಿಶ್ರಾಂತಿ ಪಡೆಯಲು
ಕಟ್ಟಿಸುವೆನೊಂದಾಲಯವ ನೀ ಮನ
ವಿಟ್ಟು ಪೋಗುತಲಲ್ಲಿ ನೆಲಸೆಂದೊರೆಯಲಾ ಕ್ಷಣದಿ ।
ಬೆಟ್ಟದಡಿ ಗೋವಿಂದ ನೆಲಸಲು
ಪಟ್ಟಣಕೆ ಹೆಸರಾದುದೀಬಗೆ
ಹುಟ್ಟಿತಿದು ಗೋವಿಂದರಾಜನ ಪಟ್ಟಣದ ಹೆಸರು ॥ ೨೯೧

ಮಹಿಮೆಯಲಿ ಶ್ರೀ ವೆಂಕಟಾಚಲ
ಮಹಿಯೊಳಗೆ ಬಹುಶ್ರೇಷ್ಠ ಭಕ್ತರ
ಬಹುವಿಧದಲಾಕರ್ಷಿಸುತ್ತಿಹ ಸರ್ವಜನಗಳಿಯ ।
ಸಹಿಸಲಾರದ ಬವಣೆಗಳ ತಾ
ದಹಿಸುತಿರುವನು ಕಲಿಯುಗದ ನಿಜ
ಮಹಿಮೆಯಿದು ಶ್ರೀ ವೆಂಕಟೇಶ್ವರನೊಲಿದ ಸಜ್ಜನಕೆ ॥ ೨೯೨

ಕಷ್ಟಗಳು ಸಮ್ಮಾರ್ಜಿತದಿ ನಮ
ಗೆಷ್ಟು ತೊಡರಲು ಶ್ರೀನಿವಾಸನಿ
ಗಿಷ್ಟವಾದರೆ ಸುಲಭವಿದು ನಮ್ಮೆಲ್ಲವಿಸರ್ಜಿತವು ।
ಸೃಷ್ಟಿಕರ್ತನ ನಿಯಮವಿದು ನಾ
ವೆಷ್ಟು ವಿಧದಿಂದಾರ್ಜಿಸಿದೊಡದ
ರಷ್ಟು ಫಲಗಳ ಸಲಿಸುತಿರುವನು ನಿತ್ಯಜೀವನದಿ ॥ ೨೯೩

ಬೆಟ್ಟದಲಿ ಶ್ರೀ ವೆಂಕಟೇಶ್ವರ
ಬೆಟ್ಟದಡಿ ಗೋವಿಂದರಾಜನು
ಗಟ್ಟಿಗರು ಕಲಿಯುಗದ ಭಕ್ತರ ಕಷ್ಟಗಳೆಯಲ್ಕೆ ।
ಕೊಟ್ಟು ಮುಂಡೆಯ ಮೊದಲು ಭಕ್ತರು
ತೊಟ್ಟು ಮಡಿಯೊಳು ಮುಗಿಸಿ ಜಳಕವ
ಗಿಟ್ಟಿಸುವರತ್ಯಧಿಕ ಪುಣ್ಯವ ದೇವದರ್ಶನದಿ ॥ ೨೯೪

ನಡೆದು ಗಿರಿಯಿಂದಡಿಗೆ ಸುಜನರು
ಪೊಡಮಡುತ ಗೋವಿಂದರಾಜನ
ಕಡುಕರುಣಾಸಾಗರದಿ ಮುಳುಗುವರಧಿಕ ಭಕ್ತಿಯಲಿ ।
ತೊಡರುವತಿ ಕಷ್ಟಗಳನೆಲ್ಲವ
ಬಿಡಿಸುವರು ಸೋದರರು ಭಕ್ತರ
ನಡತೆಗನುಗುಣವಾಗಿ ತಿರುಪತಿ ಪುಣ್ಯಕ್ಷೇತ್ರದಲಿ ॥ ೨೯೫

ಅಗಣಿತಾದ್ಭುತ ಪುಣ್ಯಪುರುಷನ
ಸುಗುಣ ಸತ್ವಕೆ ದಿನದಿನಕೆ ಜನ
ದ್ವಿಗುಣ ಸಂಖ್ಯೆಯೊಳಧಿಕವಾಗುತಲಿಹುದು ನಿತ್ಯದಲಿ ।
ಜಗದ ಸಿರಿಗತ್ಯಧಿಕ ತಿರುಪತಿ
ಯುಗಪುರುಷ ಶ್ರೀ ವೆಂಕಟೇಶನ
ಸೊಗಕೆ ಮಿಗಿಲ್ಲಿನ್ನಿಲ್ಲವೆನ್ನುವ ತೆರದ ಕ್ಷೇತ್ರವಿದು ॥ ೨೯೬

ಏಳುಬೆಟ್ಟಗಳೊಡೆಯ ವೆಂಕಟ
ನಾಳುತಿರುವನು ವೆಂಕಟಾದ್ರಿಯು
ಪಾಲಿಸುತ್ತಿಹ ಸಪ್ತಗಿರಿಗಳವಾಸ ತಾನೆಂದೆನಿಸಿ ತಿರುವಂತೆಗೆ ।
ಲೋಲ ಶೇಷಾದ್ರಿಯೊಳು ಪವಳಿಸಿ
ಮೇಲೆ ಸಿಂಹಾದ್ರಿಯನು ದೃಷ್ಟಿಸಿ
ಕಾಲದಲಿ ಗರುಡಾದ್ರಿಗೇರುತಲಂಜನಾದ್ರಿಯಲಿ ॥ ೨೯೭

ನರಯಣಾದ್ರಿಗಳೊಡೆಯ ವಸಂತ
ವರದವೃಷಭಾದ್ರಿಯಲಿ ಕರುಣಿಸಿ
ಸುರಕುಲದ ಸಪ್ತಾದ್ರಿಗೊಪ್ಪುವ ದೇವವೆಂಕಟನು ।
ಸುರನರರುಗಳಿಗಗಣಿತಭಯವ
ನಿರುತ ನೀಡುತ ಗಿರಿಗಳಲಿ ತಾ
ನಿರುವ ಪರಿಯಂತರವು ಕರುಣಾಧಾರೆ ಸುರಿಯುವುದು ॥ ೨೯೮

ಹಿಂದೆ ಭಕ್ತರು ಗಿರಿಯ ದಾರಿಯೊ
ಳಂದು ನಡೆಯುತಲಿರ್ದರಾ ಗೋ
ವಿಂದ ನಾಮವ ಭಜಿಸುತೆಲ್ಲರು ಪಯಣ ಮಾರ್ಗದಲಿ ।
ಇಂದು ಭಕ್ತರುಗಳಿಗೆ ವಾಹನ
ಒಂದರಿಂದೊಂದಿರುವುದರಿಂ
ದಂದವಾಯಿತು ಪಯಣ ಗಿರಿಗಳಿಗೊಡೆಯನಿರುವೆಡೆಗೆ ॥ ೨೯೯

ಸಾಗುತಿರುವೀವಾಹನದಿ ಜನ
ಹೋಗುತಿರುವರು ಬಹಳ ಸುಲಭದ
ಸೋಗಿನಲಿ ನಿಜಭಕ್ತಜನಗಳು ಗಿರಿಯ ದೊರೆಯೆಡೆಗೆ ।
ರೋಗರುಜಿನಗಳೆಲ್ಲವನು ಭವ
ರೋಗಿ ವೆಂಕಟರಮಣ ದರುಶನ
ನೀಗುವುದು ಭಕ್ತಾದಿಗಳ ಮನದಿಚ್ಛೆಗನುಗುಣದಿ ॥ ೩೦೦

ಇಷ್ಟವಾದರೆ ಶ್ರೀನಿವಾಸಗ
ದೆಷ್ಟು ಸುಲಭವೊ ಭವದ ಕೋಟಿಯ
ಕಷ್ಟಗಳ ದೂಡುವನು ಕರುಣದಿ ದಯಾಮಯಾಂಕಿತನು ।
ತುಷ್ಟಿಯಿಲ್ಲದ ಜನಕೆ ದರುಶನ
ವೆಷ್ಟು ಪುಣ್ಯವೊ ದೊರಕಲಿಲ್ಲಾ
ದೃಷ್ಟವೆಂದು ದುರಾಸೆ ಪಟ್ಟರೆ ದೈವದೃಷ್ಟ್ಯಸನು ॥ ೩೦೧

ದೇವದೇವನೆ ನಿನ್ನ ಮಹಿಮೆಯ
ದಾವಪರಿಯಲಿ ದೊರಕಿತೆನಗಂ
ದಾವ ಜನ್ಮದ ಪುಣ್ಯವೋಮೇಣತ್ತ ಕರುಣೆಯದೊ ।
ಆವ ವೇದಾಧ್ಯಯನ ಪುರುಷರ
ಭಾವನೆಗೆ ನೀ ದೊರೆಯೆಯಲ್ಲದೆ
ದೇವಕೀಸುತ ನಿನ್ನ ಮಹಿಮೆಯನೆನಿತು ಬಣ್ಣಿಸಲಿ ॥ ೩೦೨

ಇಂದು ಭಜಗೋವಿಂದ ಭಕ್ತರ
ಮುಂದೆ ನಿಜ ಗೋವಿಂದ ಮುಕ್ತಿಗೆ
ತಂದೆ ನೀ ಗೋವಿಂದ ತಿರುಪತಿಯಂದ ಗೋವಿಂದ ।
ವಂದರಿಗೆ ಗೋವಿಂದ ನೀ ಫಲ
ಹೊಂದವರ ಗೋವಿಂದ ನಿನ್ನಯ
ಕಂದರಿಗೆ ಗೋವಿಂದ ನಿತ್ಯಾನಂದ ಗೋವಿಂದ ॥ ೩೦೩

ವಲ್ಲಭನ ನೇಮದಲಿ ರಂಜಿತ
ವಲ್ಲಭೆಯು ತಾನಾಗಿ ನೆಲಸಿಹ
ಳಲ್ಲಿ ಮಂಗಾಪುರದಿ ದೀನರ ವರದೆ ತಾನಾಗಿ ।
ಎಲ್ಲಸಿರಿಸಂಪದಕೆ ವಾಹಿಸು
ಕಲ್ಲಿನಾಕಾರದಲಿ ನೆಲಸಿರು
ವಲ್ಲಿ ನೀಡುತಲಿಹಳು ಭಕ್ತರ ಮುಕ್ತಿ ಸಂಪದವ ॥ ೩೦೪

ಶಿರವ ಪದದಡಿಯಿಟ್ಟು ವಂದಿಸಿ
ತಿರುಗಿ ತಾಮೇಲೆದ್ದು ನೋಡಲು
ತಿರುಮಲೆಯ ಶ್ರೀ ವೆಂಕಟೇಶ್ವರ ಮಾಯವಾಗಿರಲು ।
ತೆರೆದ ಕಣ್ಗಳ ಮರೆದು ಭಕ್ತನು
ಪರಮ ಮಂಗಳ ಮೂರ್ತಿ ರೂಪವ
ಧರಿಸಿ ಮನದೊಳು ನಿತ್ಯದೊಸೆಯಲಿ ಪಗಡೆಯಾಡುತಿರೆ ॥ ೩೨೦

ಒಂದು ದಿನ ಬಾಲಾಜಿ ಭಕ್ತನ
ಮಂದಿರದೊಳಾಡುತಿರೆ ಪಗಡೆಯ
ನೊಂದು ದನಿಯನು ಕೇಳಿ ತಾನಿಂತೆಂದ ಭಾವಜಿಗೆ ।
ಅಂದನಾರೋ ಕರೆದ ನಿನ್ನನ
ದೆಂದು ಹೇಳಲು ಬಂದು ಹೊರಗಡೆ
ಯಿಂದ ಭಾವಜಿ ನೋಡಿ ಮರಳಿದನಾರ ಕಾಣದಲೆ ॥ ೩೨೧

ಅಲ್ಲಿಯಾಶ್ರಮದೊಳಗೆ ಸ್ವಾಮಿಯು
ಯಿಲ್ಲವಾದುದ ಕಂಡು ಭಾವಜಿ
ಯಲ್ಲಿ ನೋಡಿದ ದೇವ ಬಿಟ್ಟಿಹ ಕಂಠಿಹಾರವನು ।
ಎಲ್ಲಿ ಪೋದರೊ ಸ್ವಾಮಿ ಹಾರವ
ನಿಲ್ಲಿ ಬಿಟ್ಟಿಹ ಮರಳಿ ಹಾರಕೆ
ಇಲ್ಲಿ ಬರುವರೆ ಮರೆತು ಹೋಗಿಹರೆಂದು ಚಿಂತಿಸುತ ॥ ೩೨೨

ನೆನನೆನೆದು ಬೆಳಗಾಗೆ ಸ್ವಾಮಿಯು
ಮನೆಗೆ ಬರದುದ ಕಂಡು ತವಕದಿ
ತನಗೇ ತಾನೇ ಕೊಂಡು ಬಂದನು ಕಂಠಿಹಾರವನು ।
ಅನಿತರೊಳು ಪೂಜಾರಿ ಕರ್ಪರ
ಮನೆಕೆ ಸ್ವಾಮಿಯ ಹಾರ ಕಾಣದೆ
ವಿನಯದಲಿ ದೂರಿತ್ತರಧಿಕಾರಿಗಳು ಸ್ವಾಧಿಗೆ ॥ ೩೨೪

ಅಬ್ಬರದ ಭುಗಿಲೆದ್ದು ಹಾರದ
ಬೊಬ್ಬೆಯೊಳು ಜನರಿರಲು ನಿಲಯಕೆ
ಮಬ್ಬಿನೊಳು ಭಾವಾಜಿ ತಂದನು ಕಂಠಿಹಾರವನು ।
ಕೊಬ್ಬಿದೀ ಬೈರಾಗಿ ಕಳ್ಳನು
ತಬ್ಬಿರಿವನನು ಬಿಡದೆ ಜನರಂ
ದಬ್ಬರಿಸೆ ಪೂಜಾರಿ ವರ್ಗವು ಧರ್ಮದಧಿಕಾರಿ ॥ ೩.೨೫

ಬಿಡಿರಿ ಬೈರಾಗಿಯನು ನೀವ್ಗಳು
ಪೊಡೆಯಬೇಡಿರಿ ನಾನು ಪರಿಕಿಸಿ
ಕೊಡುವೆ ಸತ್ಯವನೆನಲು ದೂರಕೆ ಸರಿದ ಜನರೆಲ್ಲ ।
ನಡೆದುದೆಲ್ಲವ ಧಣಿಗೆ ಪೇಳಲು
ನುಡಿವರಿವನೊಳು ಪಗಡೆಯಾಟ
ದೊಡೆಯು ಬಂದವನೆ ದಿಟವೆ ಕಳ್ಳನ ಮಾತಿದೆಂದೆನುತ ॥ ೩.೨೬

ಒಳ್ಳೆಯವರುಗಳಿಹರು ಸುಜನರೆ
ಕಳ್ಳನಾಗುವನುಂಟು ಕುಹಕಿಗೆ
ಪೊಳ್ಳುಮಾತುಗಳಾಡುವವರು ಜನ ಸಮಯಸಾಧನೆಗೆ ।
ತಳ್ಳಿಕಾಲವ ಕಳೆದು ನೋಡಲು ।
ಕಳ್ಳನೇ ಬೈರಾಗಿಯಾಗುವ
ನಲ್ಲಿ ಜನಗಳು ತಿಳಿದು ನೈಜವ ಸತ್ಯ ಪರಿಕಿಸಲು ॥ ೩.೨೭

ವಿನಯತೆಯು ಸೌಭಾಗ್ಯ ಹೆಮ್ಮೆಯು
ನೆನೆತು ಕಾಣ್ವರು ತನ್ನ ಜಾಣ್ಮೆಯು
ತನವನರಿಯದ ಲೌಕಿಕಾತ್ಮಕ ಮಂದಮತಿಯುತರು ।
ಮನದ ನೆಲೆ ನಿಜವರಿಯದಾತನು
ಕನವರಿಸೆ ಪರರಿಂಗಿತಾರ್ಥಕೆ
ದಿನಗಳಳಿದರು ತಿಳಿಯಲಾರರು ಸತ್ವಗುಣಯುತನ ॥ ೩.೨೮

ಕೊಂಡು ತಂದಧಿಕಾರಿಗಳು ಭೂ
ಮಂಡಲಾಧಿಪ ವಿಜಯನಗರದ
ದಂಡದಧಿಪತಿ ಕೃಷ್ಣದೇವನ ರಾಯನರಮನೆಗೆ ।
ಮಂಡಿಸಲು ಪೂಜಾರಿಗಳು ಬಲು
ಕೆಂಡದಂತಹ ಕುಹಕ ನುಡಿಗಳ
ಮಂಡಲೇಶನು ಸತ್ಯದನ್ವೇಷಣೆಗೆ ಮನಮಾಡಿ ॥ ೩೨೯

ತಿಳಿದು ವಿವರವ ಯೋಗಿಯೊಳು ದೊರೆ
ತಿಳಿಸಿ ಪರಿಕಿಸಲೊಂದು ಮಾರ್ಗವ
ಸುಳಿವಕೊಟ್ಟನು ರಾಜ ಭಾವಾಜೀಯೊಳೀ ತೆರದಿ ।
ಸುಲಿದ ಕಬ್ಬಿನ ಗಾಡಿಯೊಂದನು
ಕಳಿಸುವೆನು ನೀನೊಂದು ರಾತ್ರಿಗೆ
ಉಳಿಸದಲೆ ನೀ ತಿಂದರೆಲ್ಲವ ನಿಜಕೆ ಬೈರಾಗಿ ॥ ೩೩೦

ಎಂದು ಕಬ್ಬಿನ ಗಾಡಿಯೊಂದನು
ತಂದು ಕೊಠಡಿಗೆ ಸುರಿದು ಯೋಗಿಯ
ತಿಂದು ಮುಗಿಸಲು ಭಕ್ತನೀನಹೆಯೊಂದು ರಾತ್ರಿಯಲಿ ।
ಅಂದು ಕೊಠಡಿಯ ಬೀಗಮುದ್ರೆಯ
ಬಂಧನದಿ ತಾನಿರಿಸಿ ರಾಯನು
ಬಂದನಿತ್ತಲು ಯೋಗಿ ಕಬ್ಬಿನ ರಾಶಿಯನು ಕಂಡು ॥ ೩೩೧

ನಾನು ಕಬ್ಬನು ತಿನ್ನದಿರೆ ಮುಂ
ದೇನು ಗತಿಯೆಂದಂಜದಲೆ ಹರಿ
ಧ್ಯಾನದಲಿ ಭಾವಾಜಿ ಮುಳುಗಿದನಂದು ರಾತ್ರಿಯಲಿ ।
ನಾನು ನನ್ನದದೇನು ಸರ್ವಕೆ
ನೀನೆ ಕಾರಣದಾವ ತಪ್ಪಿಗೆ
ನೀನು ಎನಗೀ ಪರಿಯನೊಡ್ಡಿದೆಯೆಂದು ಧ್ಯಾನಿಸುತ ॥ ೩೩೨

ಕರಿಯು ಮೊರೆಯಲು ಪೊರೆದೆಯಾತನ
ತರಳ ಕರೆಯಲು ಬಂದೆ ಕಂಬದಿ
ತರುಣಿ ಹರಿಯೆಂದೊರಲೆ ಮಾನವ ಕಾಯ್ದ ಸಮಯದಲಿ ।
ಧರಣಿಯನು ಸಂರಕ್ಷಿಸಿದೆ ನಿಜ
ವರಿತು ಪಾಂಡವ ಪಕ್ಷವಹಿಸಿದೆ
ಧುರದೊಳಗೆ ತಲೆಗಾಯ್ದೆ ಪಾರ್ಥನ ಕರುಣಿಸೈ ದೇವ ॥ ೩೩೩

ಈ ಪರಿಯ ಸದ್ಭಾವದೊಳಗಾ
ತಾಪಸೋತ್ತಮ ಸ್ಮರಿಸಿ ನಿದ್ರಿಸ
ಲಾಪರಾತ್ಪರ ಮೂರ್ತಿ ಬಂದನು ಕರಿಯ ರೂಪದಲಿ ।
ಶಾಪನಾಶಕ ಕಬ್ಬುರಾಶಿಯ
ತಾಪವಿಲ್ಲದೆ ತಿಂದು ಪಾಪದಿ
ತಾಪಸಿಯನಪ್ಪಿಸಿದ ಬೆಳಗಾಯ್ತೆಂದು ಸೊಂಡಿಲಲಿ ॥ ೩೩೪

ನೋಡಿ ಕಬ್ಬಿನರಾಶಿ ಕಾಣದೆ
ಪಾಡಿದನು ಭಾವಾಜಿ ದೇವನು
ನಾಡಿಗೊಡೆಯನು ಭಕ್ತ ರಕ್ಷಕನೆಂದು ಕೈ ಮುಗಿದು ।
ಜಾಡಿಸಿತು ಗಜ ಘೀಂಕಾರ ಶಬ್ದದಿ
ಕೂಡಿ ಬಾಗಿಲ ತೆರೆಯೆ ಕಂಡರು
ಓಡಿ ಹೋದಾಗಜವನೆಲ್ಲರು ದೃಷ್ಟಿಯಂತ್ಯದಲಿ ॥ ೩೩೫

ದೇವ ಬಂದನು ಗಜದ ರೂಪದಿ
ಭಾವಜಿಯ ಪೊರೆಯಲ್ಕೆ ದಿಟವಿದು
ನಾವು ಖಳಸನ್ಯಾಸಿಯೆಂದುದು ತಪ್ಪುತಪ್ಪೆಂದು ।
ಆವರಿಸಿ ಜನರೆಲ್ಲ ಯೋಗಿಯ
ನೀವು ಭಕ್ತರು ಕ್ಷಮಿಸಬೇಕೆಂ
ದಾವ ಜನಗಳು ಮಣಿದು ಬಿದ್ದರು ಭಕ್ತನಡಿಗಳಿಗೆ ॥ ೩೩೬

ಮೊರೆಯ ಮನ್ನಿಸಿ ಬಂದು ಭಕ್ತನ
ಪೊರೆಯಲಾ ಜನರೆಲ್ಲ ಭಕ್ತಾ
ಭರಣನೆಂಬುದು ನಿತ್ಯಸತ್ಯವಿದೆಂದು ಶ್ರೀಹರಿಯ ।
ಕರವ ಜೋಡಿಸಿ ಮುಗಿದು ಬಾಯಲಿ
ಹರಿಯ ಭಜಿಸುತ ಹತ್ತಿರಾಮನ
ಕರುಣೆಯಿದು ಗಜರೂಪದರ್ಶನವೆನುತ ಸಂತಸದಿ ॥ ೩೩೭

ಭವದ ಭಯದಲಿ ಭಕ್ತಕೋಟಿಯು
ದಿವಿಜರಿಗೆ ಸಮಭಕ್ತ ಭವಜಗೆ
ಭವನವೊಂದನು ನಿರ್ಮಿಸಿದರಾ ಜಾವಪ್ಪೆದರಲಿ ।
ಇವನ ಜನ ಬಹುಕಾಲ ಸ್ವಾಮಿಯ
ಸವಿಯ ದರುಶನದಂತೆ ಕಂಡರು
ದಿವಿಜಕೋಟಿಯ ಬೆರಗುಗೊಳಿಸಿದ ಭಕ್ತನಿವನೆಂದು ॥ ೩೩೮

ಇರಲಿರಲು ಕಡೆಗಾಲವಡರಲು
ಹರಿಯ ಚರಣಕೆ ಕುಸುಮವಾಗಲು
ಹೊರಟನಾ ಭಾವಜಿಯು ಹರಿಪುರಿಗಿರಿಸಿ ದೇಹವನು ॥
ನೆರೆದ ಸಜ್ಜನರೆಲ್ಲ ಮನದಲಿ
ಸ್ಮರಿಸುತೀ ವೈರಾಗಿ ಭಕ್ತಿಗೆ
ದೊರಕಲಾ ಹರಿಸೇವೆಯೆನ್ನುತ ನೆನೆದರಾ ಹರಿಯ ॥ ೩೩೯

ಹತ್ತಿರಾಮನ ಗತಶರೀರವ
ನಿತ್ಯಪಾಪವಿನಾಶಿನಿಯ ಕಡೆ
ಯತ್ತ ದಾರಿಯ ಮಧ್ಯ ಪಸರಿಸಿ ಚಿತೆಯ ನಂತ್ಯದಲಿ ।
ಭಕ್ತಿಯಿಂ ಜನರೊಂದಿಸಲು ಚಿತೆ
ಯತ್ತ ಸ್ಥಳದಿ ಸಮಾಧಿಯೊಂದನು
ಕಟ್ಟಿಸಿರುವರು ನಿತ್ಯದರುಶನ ಭಕ್ತಿಭಾವನೆಗೆ ॥ ೩೪೦

ಪೂರ್ವದಲಿ ವಸುವೆಂಬ ಬೇಡನಿ
ಗೋರ್ವ ಸತಿ ಚಿತ್ರಾವತಿಯು ನಿಜ
ಕೀರ್ವರೂ ಬಹು ಭಕ್ತಜನರಾ ವೆಂಕಟಾಚಲದಿ ।
ಈರ್ವರಡವಿಯು ಜೇನುತುಪ್ಪದ
ಪೂರ್ವಬಿದಿರಕ್ಕಿಗಳು ಸರ್ವದ
ಸಾರ್ವಭೌಮನು ಶ್ರೀನಿವಾಸನಾಗಿಪ್ಪವೆಂದೆನುತ । ೩೪೧

ಅಟವಿಯಲಿ ನಿಜ ಬಂಡೆಯೊಂದನು
ದಿಟವಿದನೆ ಶ್ರೀ ವೆಂಕಟೇಶ್ವರ
ನಟನು ಮೂಜಗಕೆಂದು ನೈವೇದ್ಯವನು ಮಾಡುತಲಿ ।
ಕುಟಿಲರಹಿತರು ತಮ್ಮ ಭಕ್ತಿಯ
ಜಠರದಿಂದ ಸುವೀರನೆಂಬುವ
ಹುಟದ ಭಕ್ತ ಕುಮಾರನೊಬ್ಬನ ಪಡೆದು ಹಿಗ್ಗಿನಲಿ । ೩೪೨

ತಂದೆತಾಯ್ಗಳಗಧಿಕ ಭಕ್ತನ
ದೊಂದು ದಿನ ನೈವೇದ್ಯವಿಲ್ಲದೆ
ನೊಂದು ಶಕ್ತ ಸುವೀರ ಪಿಟನದಿ ತಂದ ಮಾಂಸವನು ।
ತಂದು ದಿನಪ್ರತಿಯಂತೆ ಸ್ವಾಮಿಯ
ಮುಂದೆ ನೈವೇದಿಪುದ ನೋಡಿದ
ತಂದೆ ಕೋಪದಿ ಸೆಳೆದು ಕೊಲ್ಲಲ್ಕೆತ್ತೆ ಕತ್ತಿಯನು । ೩೪೩

ಭಕ್ತ ನಿನ್ನ ಕುಮಾರ ಹೆಚ್ಚಿನ.
ಭಕ್ತನೆನ್ನುತ ತನ್ನ ದರುಶನ
ಮುಕ್ತಿಯಿದು ನಿಮಗೆಂದು ಹಿಡಿದನು ಭಕ್ತನಾ ಕರವ ।
ಭಕ್ತಿಯೊಂದು ಪ್ರಧಾನವಲ್ಲದೆ
ಭಕ್ತಿಯಿಲ್ಲದ ಪೂಜೆ ಸಲ್ಲದು
ಭಕ್ತರಿಗೆ ನಿಜ ಭಕ್ತಿಯೇ ಸಿರಿಯೆಂದ ಶ್ರೀರಮಣ । ೩೪೪

## ಕುಂಬಾರನ ಮಣ್ಣಿನ ಪಾತ್ರೆಯ ಕಥೆ 8,

ಭೀಮನವ ಕುಂಬಾರ ವೃತ್ತಿಯ
ನೇಮದಲಿ ನುದ್ವಾರ ಗ್ರಾಮಕ
ಧೀಮನಿದ್ದನು ವೆಂಕಟಾಚಲಕ್ಕೈದು ಮೈಲಿಯಲಿ ।
ಭೀಮ ಬಹುಬಡತನದಲಿದ್ದರು
ಸ್ವಾಮಿಗಾವ ಸಂಪ್ರೀತಿ ನುಡಿಯಲು
ನಾಮ ಭಜಗೋವಿಂದನಲ್ಲದೆ ಬಾಯೊಳಿನಿತಿಲ್ಲ ॥ ೩೪೫

ಮಣ್ಣಿನಾಸನದಲ್ಲಿ ಸ್ವಾಮಿಯ
ಸಣ್ಣನೆಯ ಪ್ರತಿಮೆಯನು ನಿರ್ಮಿಸಿ
ಮಣ್ಣಿನಿಂದಲೆ ಹೂವಿನಾರವ ಮಾಡಿ ಪೂಜಿಸುತ ।
ಕಣ್ಣತಣಿಸುವ ಕನಕ ದೇವನ
ಬಣ್ಣದಲಿ ಮನಬೆರತು ಭೀಮನು
ತಣ್ಣನೆಯ ಜೀವನವ ನಡೆಸುತಲಿರ್ದ ಭಕ್ತಿಯಲಿ ॥ ೩೪೬

ಹೆಚ್ಚಿದತಿ ಸಂತಸದಲೊಂದಿನ
ಅಚ್ಯುತನ ಧ್ಯಾನಿಸಲು ಭಕ್ತಿಗೆ
ಮೆಚ್ಚಿ ದರುಶನವಿತ್ತು ಹರಸಿದ ಭಕ್ತದಂಪತಿಯ ।
ಸಚ್ಚರಿತ ಸಂಪನ್ನರೀರ್ವರ
ಮೆಚ್ಚಿ ಕರೆಸಿ ವಿಮಾನವನು ತ
ನ್ನಿಚ್ಛೆಯಲಿ ಕುಂಬಾರನನು ವೈಕುಂಠಕೇರಿಸಿದ ॥ ೩೪೭

ಅಂದು ಕುಂಬಾರನಿಗೆ ಪೇಳಿದ
ದೊಂದು ಮಾತಿನ ತೆರದಿ ನಿಲಯದೊ
ಳಿಂದು ನೈವೇದ್ಯವದು ನಡೆವುದು ಮಣ್ಣ ಪಾತ್ರೆಯಲಿ ।
ಮುಂದರಿಗೆ ಕಂದರ್ಪಜನಕನು
ತಂದೆಯೆಂಬುದಕೊಂದು ನಡೆಯಿದ
ನೆಂದು ತಿಳಿಯುವುದುಚಿತ ಭಕ್ತರ ಮುಕ್ತಿ ಸಾಧನೆಗೆ ॥ ೩೪೮

ಚಿನ್ನನೆಂಬುವನೋರ್ವ ಹರಿಜನ
ತನ್ನ ವೃತ್ತಿಯಂ ಪಾದರಕ್ಷೆಗ
ಳನ್ನು ಮಾಡುತ ಮಾರಿ ಗಳಿಸಿದ ಗಳಿಕೆಯಲಿ ನಿತ್ಯ ।
ತನ್ನ ದೇವರು ವೆಂಕಟೇಶಗೆ
ಮುನ್ನ ಪೂಜಿಸಲೆಲ್ಲ ವಸ್ತ್ರಗ
ಳನ್ನು ಹವಣಿಸಿ ಭಕ್ತಿಯಿಂ ಪೂಜಿಸುತಲಿರುತಿರಲು । ೩೪೯

ಕೆಲವು ಕಾಲವನಿಂತು ಚಿನ್ನನು
ಕಳೆದು ಯೋಚಿಸುತಿನಿತು ಮನದಲಿ
ಬಳಿಕ ತಾನೇ ರಚಿಸಿ ಪಾದುಕೆಗಳನು ದೇವನಿಗೆ ।
ಒಲಿದ ಭಕ್ತಿಯೊಳರ್ಪಿಸಲು ತಾ
ನಲಿದನಲ್ಲದೆ ದೇವನೆನ್ನುತ
ತಿಳಿಯ ಚಿಂತಿಸುತಿರ್ದ ಸ್ವಾಮಿಯ ಪಾದದಳತೆಯನು । ೩೫೦

ಬಹುವಿಧದಿ ಚಿಂತಿಸುತಲೊಂದಿನ
ಬಹಳ ಭಕ್ತಿಯಂ ಭಾವದಲಿ ಸ
ನ್ನಿಹಿತನಾಗುತ ವೆಂಕಟೇಶನ ಭಾವಚಿತ್ರದೆಡೆ ।
ಮಹಿಯ ಪಾಲಕ ಬಡವನಿಗೆ ಮನ
ವಹಿಸಿ ಚಿನ್ಮಯ ಪಾದದಳತೆಯ
ಮಹಿಮೆಯಿಂದಲಿ ನೀ ಕರುಣಿಸೆನ್ನುತ ಚಿನ್ನ ಬೇಡುತಲಿ । ೩೫೧

ಭಾವಶುದ್ಧಿ ಬಳಿಯಂ ಮರಳನ
ಕಾವ ದೇವನ ಮುಂದೆ ಹಾಸುತ
ತೀವದಕ್ಕಿಯ ಬಿಟ್ಟನಿಟ್ಟನು ಪಾದ ಮುದ್ರಿಸಲು ।
ಆವ ಪರಿಯಲಿ ನಿನ್ನ ಕರೆಯುವ
ಭಾವವದಂ ತಾನರಿಯೆ ದೇವರ
ದೇವ ನೀ ಕೃಪೆಮಾಡು ಬೇಡುವೆನೆಂದು ಮಲಗಿದನಂ । ೩೫೨

ಭಾವುಕರ ಸಂಕಟ ನಿವಾರಕ
ದೇವ ವೆಂಕಟರಮಣ ಭಕ್ತನ
ಭಾವನೆಗೆ ತಾನ್ಯದು ಒತ್ತಿದ ಪಾದದಳತೆಯನು ।
ಆವ ಜನ್ಮದ ಪುಣ್ಯವೋ ಎನ
ಗಾವ ಮುಕ್ತಿಯು ಕರುಣೆಯೋ ನಿಜ
ದೇವನಿತ್ತಿಹ ಪಾದದಳತೆಯಿದೆನ್ನುತಾ ಚಿನ್ನ ॥ ೩೫೩

ಕರುಣದಲಿ ಮೈದೋರಿದೆನ್ನಯ
ಚರಣವಿದು ಪಾಂಚಾಲಿ ನಮಿಸಿದ
ಚರಣವಿದು ಗಂಗೆಯನು ಸೃಜಿಸಿದ ಚರಣಶ್ರೇಷ್ಠ ಪದ ।
ಚರಣವಿದು ನಿಜಧರಣಿಯೊತ್ತಿದ
ಚರಣವಿದು ಹನುಮಂತನಪ್ಪಿದ
ಚರಣವಿದು ತಾಗುವುದು ಭಕ್ತರ ಪರಮ ಪುಣ್ಯಫಲ ॥ ೩೫೪

ಸ್ವಾಮಿ ಕರುಣಿಸೆ ಪಾದದಳತೆಯ
ನೇಮದಲಿ ಜೊತೆ ಪಾದರಕ್ಷೆಯ
ಪ್ರೇಮದಿಂದೊಲಿದವನು ಪೂಜಿಸಿ ಭಾವಶುದ್ಧಿಯಲಿ ।
ಸೋಮಸೋದರಿಯುರಸ ನಿಲಯದಿ
ಸ್ವಾಮಿಗರ್ಪಿಸಲೆಂದು ಚಿನ್ನನು
ರಾಮಪಾದುಕೆಯನ್ನು ಭರತನು ತಂದ ಪರಿಯಂತೆ ॥ ೩೫೫

ತಡವರಿಸಿ ಬರುತಿರಲು ದ್ವಾರದಿ
ತಡೆದರವನನು ಕೀಳು ಹರಿಜನ
ಗುಡಿಯ ಬಾಗಿಲನಂತು ಸೇರಿದೆಯೆಂದು ಛೀಯುತಲಿ ।
ಹೊಡೆದು ತಳ್ಳಲು ಚಿನ್ನ ಬಿಕ್ಕಿದ
ಒಡೆಯ ನೀನಿಂದೆನ್ನ ರಕ್ಷಿಸಿ
ಕಡೆಯಬೇಕೆನಲಾಗ ಭಕ್ತನ ಮೊರೆಯ ಲಾಲಿಸಿದ ॥ ೩೫೬

ಸಿರಿಯರಸ ಭಕ್ತನನು ರಕ್ಷಿಸಿ
ಸರಸದಲಿ ಸ್ವೀಕರಿಸಿ ಚಿನ್ನನ
ಪರಮ ಭಕ್ತಿಯ ಪಾದರಕ್ಷೆಯ ತೊಡಲು ಪಾದಗಳು ।
ಗಿರಿಪತಿಯ ಪಾದದಲಿ ಜ್ಯೋತಿಯು
ತೆರದಿ ಮಿಂಚಲು ಚಿನ್ನನಡರಿದ
ಹರುಷದಲಿ ಬಳಸುತ್ತ ನಲಿದನು ಹರಿಯ ಚರಣವನು ॥ ೩೫೭

ಚಿನ್ನ ಪ್ರಾರ್ಥಿಸಲದಕೆ ದೈವನು
ಯನ್ನ ಸೇರುವೆಯೆಂದು ಹರಸುತ
ನಿನ್ನ ಪಾದುಕೆಗಳನು ಧರಿಸುವೆನರ್ಧರಾತ್ರಿಯಲಿ ।
ಮುನ್ನ ಮಂಗಾಪುರಕೆ ಹೋಗಲು
ನಿನ್ನ ಪಾದುಕೆಗಳನ ಧರಿಸುವೆ
ನಿನ್ನ ಆಲಿಪುರಿಯಲ್ಲಿ ಬಿಟ್ಟವ ನಿಲಯಕೈಯ್ದುವೆನು ॥ ೩೫೮

ಎನುತ ಪೇಳುತಲಿನ್ನ ಭಕ್ತರು
ಎನಗೆ ವಂದೆಯ ಕೊಟ್ಟು ಬರುತಿರ
ಲಿನಿತು ಮುಂಡೆಯ ಮೇಲೆ ಧರಿಸಲು ಪಾದರಕ್ಷೆಗಳ ।
ಎನಗೆ ಪ್ರಿಯವದು ನೀನು ತಿಳಿಯೆಂ
ದೆನುತ ಚಿನ್ನಯ ಮಾಯವಾದನು
ಅನುದಿನದೊಳೀ ಪಾದರಕ್ಷೆಗಳಲ್ಲಿ ಕೋಣಿಪವು ॥ ೩೫೯

ಮುದದೊಳರ್ಪಿಸಿ ಪಾದರಕ್ಷೆಯ
ಪದವಿಗೇರಿದ ಚಿನ್ನ ಹರಿಜನ
ನಿದನು ತಿಳಿದವಗುಂಟೆ ಜಾತಿಯನೆಟು ಜೀವನದಿ ।
ಮದನಜನಕನ ಪ್ರೀತಿಗೊಪ್ಪಲು
ಮೊದಲು ವರ್ಜಿಪುದುಚಿತ ಜಾತಿಯಂ
ಮುದವ ಪುಣ್ಯಪುರಾಣ ಪ್ರೇಮಿಗಳೆಲ್ಲ ಹರಿಪದಕೆ ॥ ೩೬೦

ಂಕಟಾಚಲ ಕ್ಷೇತ್ರದಲಿ ಬಹು
ಂಕಟಾಂಕಿತ ಪುಣ್ಯತೀರ್ಥದ
ಖ್ಯೆಗಳ ಮಿತಿ ಮೂರುನೂರರವತ್ತು ನಾಲ್ಕನಲು ।
ಂಕುರಿಸಿದರೆ ಪಾಪಗಳೆಯಲು
ಂಕಟಾಚಲ ತೀರ್ಥವೊಂದರ
ಣಂಕು ಜಳಕವೆ ಸಾಕು ದೂಡಲು ಪಂಚಪಾತಕವ ॥ ೩೬೧

ಲ್ಲ ತೀರ್ಥಕೆ ವೆಂಕಟಾಚಲ
ಲ್ಲಿ ಶ್ರೇಷ್ಠವು ತೀರ್ಥ ಪುಷ್ಕರ
ಲ್ಲಿ ನಾರಾಯಣನು ಮಾಡುತಲಿದ್ದ ಜಳಕವನು ।
ಲ್ಲವಾಧನು ಸತಿಯುಸಹಿತದ
ಲ್ಲಿ ಕ್ರೀಡೆಯನಾಡಲಿಚ್ಚಿದು
ಲ್ಲಿ ಪುಷ್ಕರಣಿಯಲಿ ಪುಣ್ಯಪ್ರಭಾವ ದಿನದಿನಕೆ ॥ ೩೬೨

ದನೆಂಬುವ ಚಂದ್ರವಂಶಜ
ಒಂದು ದಿನ ಸುತಧರ್ಮಗುಪ್ತನಿ
ದು ರಾಜ್ಯವ ಬಿಟ್ಟು ವಿಪಿನದಿ ತಪಕೆ ಪೋಗಿರಲು ।
ಂದು ದಿನ ಮೃಗಬೇಟೆಯಾಡಲು
ಂದು ದಿನವಿಡಿ ಬಳಲಿ ರಾತ್ರಿಯೊ
ಒಂದು ತರುವಿನ ಕೊಂಬೆಯಾಶ್ರಯದಲ್ಲಿ ಕುಳಿತಿರಲು ॥ ೩೬೩

ಡಿಯೊಂದನು ಸಿಂಹವಟ್ಟಿಸಿ
ಲು ಭಯದಲಿ ತಿರುತಿರುಗಿ ತಾ
ಮರೆಯು ತರುವನೆ ಹತ್ತಲಲ್ಲಿಯೆ ಕಂಡು ರಾಜನಿದ ।
ರದಿ ಜಂಬುಕವೆಂದು ಯನ್ನಯ
ರಿಯ ಮುಗಿಸುವ್ವೆಂದು ಭಯದಲಿ
ಮರೆಯು ಬೆದರಲು ಕಂಡು ಪೇಳಿತು ಕರಡಿಯಿಂತೆಂದು ॥ ೩೬೪

ಬೆದರಬೇಡೆಲೆ ರಾಜ ನಿನ್ನನು
ವಧಿಸುವನು ನಾನಲ್ಲ ಎನ್ನಯ
ವಧೆಗೆ ಕಾದಿದೆ ಸಿಂಹ ಮರದಡಿ ಕೆಳಗೆ ಬರಲೆಂದು ।
ಅದಕೆ ನೀ ನಡುರಾತ್ರಿಯವರೆಗೆ
ಮುದದಿ ಪವಳಿಸು ಎನ್ನ ತೊಡೆಯಲಿ
ಅದುವೆ ಕಡೆಯಲಿ ನಾನು ಮಲಗುವೆ ನಿನ್ನ ಮೇಲೆನಲು ॥ ೩೬೫

ದೊರೆಯು ಸಮ್ಮತಿಯಿಂದ ಮಲಗಲು
ಸರತಿ ಬಂದುದು ಮಧ್ಯರಾತ್ರಿಗೆ
ಕರಡಿರಾಜನ ತೊಡೆಯನಾಶ್ರಯಿಸಲ್ಲಿ ಪವಳಿಸಲು ।
ಕರಡಿ ದೊರೆಯನು ತಳ್ಳು ಹಸಿವೆಯ
ಹರಿಸಿಕೊಳ್ಳುವೆನೆನಲು ಸಿಂಹವು
ಕರಡಿಯೊಪ್ಪದೆ ರಕ್ಷಿಸಿತು ನಿಜರಾಜತಿಲಕನನು ॥ ೩೬೬

ನಡುವು ರಾತ್ರಿಗೆ ಕರಡಿರಾಜನ
ತೊಡೆಯನಾಶ್ರಯಿಸಲ್ಲಿ ಮಲಗಲು
ಪೊಡವಿಪನೆ ನೀ ತಳ್ಳು ಕರಡಿಯ ನೆನುತಲಾ ಸಿಂಹ ।
ಒಡಲದಾಹವ ನೀಗುತಿಲ್ಲಿಂ
ದಡವಿಯಲಿ ನಾ ಪೋಪೆ ನಿನ್ನನು
ತೊಡರೆ ನಾನೆಂದೆನಲು ಸಮ್ಮತಿಯಿಂದ ಕರಡಿಯನು ॥ ೩೬೭

ತಳ್ಳಿದನು ದೊರೆ ಧರ್ಮಗುಪ್ತನು
ಬಳ್ಳಿಯೊಂದನು ಪಿಡಿದು ಚಂಗನೆ
ತಲ್ಲಣಿಸಿ ಬೇರೊಂದು ಟೊಂಗೆಗೆ ಜಿಗಿದು ಜಂಬುಕವು ।
ಅಲ್ಲಿ ಸಿಂಹವ ಕುರಿತು ಜಂಬುಕ
ಬಲ್ಲೆ ನೀನು ಕುಬೇರನಿಗೆ ನಿಜ
ದಲ್ಲಿ ಮಂತ್ರಿಯು ಭದ್ರ ನಿನಗಿದು ಗೌತಮನ ಶಾಪ ॥ ೩೬೮

ನಾನು ಭೃಗುಕುಲಜಾತ ನಿನ್ನಯ
ಹೀನರೂಪವ ಬಿಡಿಸಿ ಮುನ್ನಿನ
ಜ್ಞಾನವನು ಕರುಣಿಸಲು ಕರಡಿಯು ಕಾಮರೂಪಿನಲಿ ।
ನಾನು ಬರೆ ವಿಶ್ವಾಸಘಾತುಕ
ಮಾನವಾಧಿಪನೀತನಿವನಿಗೆ
ಜ್ಞಾನಪಲ್ಲಟವಾಗಲೆನ್ನುತ ಶಪಿಸಿತಾ ಕರಡಿ ॥ ೩೭೯

ಶಾಪಗಳಿದಾ ಭದ್ರ ಹೊರಟನು
ಪಾಪಿ ದೊರೆ ತಾ ಬುದ್ಧಿ ಭ್ರಮೆಯಲಿ
ತಾಪಪಡುತಲಿ ತಿರುಗುತಿದ್ದನು ದೇಶದೇಶಗಳ ।
ಈ ಪರಿಯಲಾ ಧರ್ಮಗುಪ್ತನು
ಶಾಪಗಳೆಯಲು ಮಂತ್ರಿವರ್ಯರು
ಭೂಪನಂದನ ಕಂಡು ತಿಳಿಸಿದರೆಲ್ಲ ವಿವರವನು ॥ ೩೮೦

ನಂದ ತನ್ನಯ ಮಗನ ಹುಚ್ಚಿಗೆ
ನೊಂದು ಜೈಮುನಿವರನ ಬಳಿಗೈ
ತಂದು ಪೇಳಿದ ಸುತನ ದುಸ್ಥಿತಿಯದನು ಪರಿಹರಿಸೆ ।
ಬಂದ ಭವ ತಾ ಮುನಿಯು ಪೇಳಿದ
ನೆಂದು ವೆಂಕಟ ಪುಷ್ಕರಣಿಯೊಳು
ಮಿಂದು ಶಾಪವ ಕಳೆದುಕೊಂಡನು ರಾಜ ಭಕ್ತಿಯಲಿ ॥ ೩೮೧

ನೇಮದಿಂ ಧ್ಯಾನಿಸುತ ರಾಜನು
ಸ್ವಾಮಿಯನು ಶ್ರೀ ವೆಂಕಟೇಶನ
ಪ್ರೇಮದಿಂದವನಗ್ರಹಾರಗಳನ್ನು ಕೊಟ್ಟಿರಲು ।
ಸ್ವಾಮಿ ಪುಷ್ಕರಣಿಯಲಿ ಜಳಕವ
ನೇಮದಿಂ ಮಾಡಿದೊಡೆ ಗಳಿಸುವ
ನೇಮವಿದು ಭಕ್ತಜನ ಸಕಲಾರೋಗ್ಯಭಾಗ್ಯಗಳ ॥ ೩೮೨

ನಂಬಿಯೆಂಬುವ ವೃದ್ಧನೋರ್ವನು
ನಂಬಿ ಭಕ್ತಿಯ ನಿತ್ಯದಲಿ ತಾ
ತುಂಬಿಕೊಂಡಾಕಾಶ ಗಂಗೆಯ ತೀರ್ಥವನು ತಂದು ।
ಹೊಂಬಿಸಲು ಮೂಡಣದಿ ಮೂಡುವ
ದೆಂಬ ಮೊದಲಭಿಷೇಕ ಮಾಡುವ
ನೆಂಬ ಮುದುಕನ ಕಠಿಣ ಭಕ್ತಿಯ ಕಂಡು ಶೇಷಚಲ ॥ ೩೭೩

ಬಾಣದಲಿ ಗಂಗೆಯನು ತಂದಾವ
ಮಾಣಿಸಲು ಭಕ್ತನಿಗೆ ಶ್ರಮವನು
ದಾಣೆಗಿದುವಾಕಾಶಗಂಗೆಯು ಹೆಸರು ಹಾರಿಸಿತು ।
ಜಾಣ ವೆಂಕಟರಮಣ ಸ್ವಾಮಿಯ
ಕಾಣೆಗಿದು ಬಹುಶ್ರೇಷ್ಠವಲ್ಲದೆ
ಕಾಣಗಳ್ವುದನೇಕ ಭವಗಳನಿದರ ಜಳಕದಲಿ ॥ ೩೭೪

ಓರ್ವ ಕೇಶವಭಟ್ಟನೆಂಬ ನಿ
ಗರ್ವಿ ಬ್ರಾಹ್ಮಣನಿದ್ದ ಬಹುದಿನ
ಪೂರ್ವದಲಿ ಗೋದಾವರಿಯ ನದಿ ತೀರದಲಿ ನೆಲಸಿ ।
ಸಾರ್ವಭೌಮನ ವೇದಗಳಿಗವ
ನೋರ್ವನೇ ತಾನೆಂಬ ತೆರದಲಿ
ಸರ್ವಕಾಲವನತಿಥಿಯಭ್ಯಾಗತರ ಸೇವೆಯಲಿ ॥ ೩೭೫

ಕಳೆಯುತಿರಲಾ ಬ್ರಾಹ್ಮಣೋತ್ತಮ
ನಿಳೆಯಹಾರ ಜಾಣನೆಂಬುವ
ಗಳಿಕೆಯನು ತಾ ಗಳಿಸಿ ಕಾಲವ ಕಳೆಯುತಲ್ಲಿರಲು ।
ಇಳೆಯ ಬ್ರಾಹ್ಮಣನೋರ್ವನಲ್ಲಿಗೆ
ತಿಳಿಯದಲೆ ತಾ ಬಂದನೇತನ
ಕಳೆದ ತಂದೆಯ ಶ್ರಾದ್ಧದಂದವ ಕೇಶವನ ಗೃಹದಿ ॥ ೩೭೬

ಬ್ರಾಹ್ಮಣಾರ್ಥಕೆ ಬಂದನೀತನೆ
ಬ್ರಾಹ್ಮಣನು ಸಾಕೆಂದು ಕೇಶವ
ಬ್ರಾಹ್ಮಣರ ವಿಧಿಯಂತೆ ನಡೆಸಿದ ತಂದೆ ಶ್ರಾದ್ಧವನು ।
ಬ್ರಾಹ್ಮಣರು ಬಹುಶ್ರೇಷ್ಠರೆನಿಸಿದ
ಬ್ರಾಹ್ಮಣತ್ವವನುಳಿಸಿದಾತನೆ
ಬ್ರಾಹ್ಮಣರೊಳಗೆ ಶ್ರೇಷ್ಠನಲ್ಲವೆ ಬ್ರಹ್ಮಸೃಷ್ಟಿಯೊಳು । ೩೭೭

ಇನಿತು ಕಾರ್ಯವ ನಡೆಸಿ ಭಟ್ಟನು
ದಿನದಿನಕೆ ತಾ ತನುವಿಕಾರದಿ
ಕೊನೆಗೆ ತಿರುಗಿತು ಮುಖವು ಕತ್ತೆಯ ಮುಖದ ಪರಿಯಂತೆ ।
ಕೊನೆಯ ಕತ್ತೆಯ ಮುಖದಿ ಕೇಶವ
ನೆನೆದು ಬಂದ ಸುವರ್ಣಮುಖರಿಯೆಡೆ
ಗನತಿ ಕಾಲದೊಳಗಸ್ತ್ಯ ಮುನಿಯಾಶ್ರಮಕೆ ವಂದಿಸುತ ॥ ೩೭೮

ಯೋಗದೃಷ್ಟಿಯ ಕೋನದಿಂದವ
ನಾಗ ತಿಳಿಯುತಗಸ್ತ್ಯನೀತನ
ರೋಗ ದುಸ್ಥಿತಿಯನ್ನು ಹೇಳಿದನಿವಗೆ ವಿವರದಲಿ ।
ರೋಗಿ ವಿಪ್ರನೆ ಪಿತನ ಶ್ರಾದ್ಧಕೆ
ಭೋಗ ನಿಜಸಂತಾನ ಶೂನ್ಯ ವಿ
ರಾಗಿ ಭೂಸುರ ನೇಮಕದ ಫಲವಿದಕೆ ಚಿಂತಿಸದೆ । ೩೭೯

ತೊಲಗು ನೀನಾ ವೆಂಕಟಾಚಲ
ನೆಲೆಯೊಳಿರುವಾಕಾಶಗಂಗೆಯು
ಜಳಕದಲಿ ನೀ ಕಳೆವೆ ಕರ್ಮವನೆಂದನಾ ಮುನಿಪ ।
ಬಳಿಕ ಮುನಿಪದಯುಗಕೆ ವಂದಿಸಿ
ತಿಳಿದು ವಿವರವ ಬಂದು ಜಳಕಿಸೆ
ಕಳೆದುದಾ ಬ್ರಾಹ್ಮಣನ ವಿಕೃತರೂಪು ಗಂಗೆಯಲಿ ॥ ೩೮೦

ನೆನೆದರದರಿಂದಷ್ಟು ಪುಣ್ಯವೊ
ಮನಸಿನಲಿ ನಾವ್ಗಣಿಸಲಾಗದು
ಎನಿತು ಪಾಪದರಾಶಿಗಳಿವುದು ದಿವ್ಯಕ್ಷೇತ್ರದಲಿ ।
ಅನುದಿನವು ಜನಕೋಟಿಗಿದು ಫಲ
ವನಿಸಿತೋರ್ಪುದು ವೆಂಕಟಾಚಲ
ಮನುಮುನಿಗಳಿಗೆ ತಮ್ಮಭೀಷ್ಟದ ಗಳಿಕೆ ಮಾರ್ಗದಲಿ ॥ ೩೮೧

ಭೂಸುರರೊಳಗೆ ಶ್ರೇಷ್ಠನೆನಿಸಿದ
ವಾಸಿ ಪೂರ್ವದಿ ಭದ್ರಮತಿಯವ
ಗೇಸು ಪುಣ್ಯವೊ ಷಡ್ಸತಿಯರಿಗವನೋರ್ವನೇ ಪತಿಯು ।
ಈ ಸುದತಿಯರುಗಳಿಗೆಲ್ಲ ಜನಿಸಿದ
ರೇಸು ಮಂದಿಯೋ ಮನೆಯು ತುಂಬಿತು
ಲೇಸ ಬಯಸುವ ಮಕ್ಕಳೆಲ್ಲರು ಪ್ರೀತಿಪಾತ್ರದಲಿ ॥ ೩೮೨

ಆರುಜನ ಸತಿಯರಿಗೆ ಜನಿಸಿದ
ಪಾರ ಮಕ್ಕಳ ಸಂಖ್ಯೆಯಿಂದಿವ
ಮೀರಿದತಿ ಸಂಕಟಕೆ ತೊಡಗಿದನುದರ ಪೋಷಣೆಗೆ ।
ಆರದುಡಿಮೆಯು ಸಾಲದಾಯಿತು
ಕ್ಷೀರವಾರಿಧಿಶಯನ ಕಾಣೇ
ಪಾರುಗಾಣಿಸಲೆಂದು ನಿಷ್ಕ್ರಿಯನಾದ ಭದ್ರಮತಿ ॥ ೩೮೩

ಸತಿಯರಾರಕೆಶೋಮತಿಯು ಪ್ರಿಯ
ಗತಿಕಯಳು ತಾ ಬಹು ವಿವೇಕಳು
ಪತಿಗೆ ನೆಚ್ಚಿನ ಮಡದಿ ತಾನೆನಿಸಿದ್ದರವರೊಳಗೆ ।
ಚತುರ ಬ್ರಾಹ್ಮಣ ಭದ್ರಮತಿಗಾ
ಸತಿಸುತರುಗಳ ನಿತ್ಯಜೀವನ
ಸತತದಲಿ ಬಹು ಕಠಿಣವಾಯಿತದಶನ ಪಾನದಲಿ ॥ ೩೮೪

ಶೀಲದಲಿ ಸಂಪನ್ನೆ ಕಿರುಸತಿ
ಹೇಳಿದಳು ತನ್ನಿನಿಯನಿಗೆ ಸಿರಿ
ಲೋಲನೊಲಿಯಲು ವೆಂಕಟಾಚಲದತಿಶಯೋಕ್ತಿಯನು ।
ಕೇಳು ಪಾಪವಿನಾಶನದಿ ಶುಭ
ಕಾಲ ತೀರ್ಥಸ್ನಾನ ನಿಯಮವ
ಪಾಲಿಸಲು ನಿಜಭೋಗ ದೊರೆಯುವುದೆಂದಳಾ ಯುವತಿ ॥ ೩.೮೫

ಇನಿತು ಪಾಪವಿನಾಶ ಚರಿತದಿ
ಘನತೆಯಿಂದಿಹಪರದ ಸೌಖ್ಯವು
ಮನುಮುನಿಗಳಿಗೆ ಲಭ್ಯವೆಂಬುದ ಕೇಳಿ ತಿಳಿದಿಹೆನು ।
ಮುನಿವರರ ಸುಶ್ರೇಷ್ಠ ನಾರದ
ಮುನಿಯೊಳಿದನವರೆನ್ನ ತಂದೆಗೆ
ತನುವು ಪುಳಕಿಸುವಂತೆ ಪೇಳಿದರೆಂದಳಾ ರಮಣಿ ॥ ೩.೮೬

ಎಂದು ಪೇಳಿದ ಸತಿಯ ಸೂಕ್ತಿಗೆ
ಒಂದುಪಾಯವ ತಿಳಿಯದಲೆ ತಾ
ಮುಂದೆ ಮಾಡುವ ಪರಿಯ ಚಿಂತಿಸುತಿರ್ದ ಭೂಸುರನು ।
ಮಂದಮತಿ ತಾನಾದ ಮನುಜನಿ
ಗೊಂದುಪಾಯವನೊಲಿದು ಪೇಳುವ
ಸುಂದರೀಮಣಿಯವಳ್ ತನ್ನಯ ಪತಿಗೆ ನಿಜಮಂತ್ರಿ ॥ ೩.೮೭

ಆ ಯಶೋಮತಿ ಸತಿಯ ಸೂಚನೆ
ಕಾಯಕವೆ ಸಂಸಾರವನು ತಲೆ
ಗಾಯಬೇಕೆಂದಾತ ತನ್ನೊಳಗುತಾನೆ ಯೋಚಿಸುತ ।
ಬಾಯಿಮಾತಿನೊಳೊಂದು ಕಾಣದೆ
ತೋಯಜೋದರ ವೀನೆಯನ್ನನು
ಕಾಯಬೇಕೆಂದೊರಟನಾಗಲೆ ಮುಂದೆ ಭದ್ರಮತಿ ॥ ೩.೮೮

ನಡೆದು ಹತ್ತಿರದಗ್ರಹಾರಕೆ
ಬಡವ ಭದ್ರ ಗೃಹಸ್ಥನೋರ್ವನ
ಒಡೆಯ ಬ್ರಾಹ್ಮಣಗೊಲಿದುಕೊಟ್ಟ ಗೃಹಸ್ಥ ಭೂಮಿಯನು ।
ಪಡೆದು ಸಂತಸದಿಂದ ಭದ್ರನು
ನಡೆದ ವೆಂಕಟಚಲಕೆ ಸ್ನಾನವ
ನಡೆಸಿ ಪಾಪವಿನಾಶತೀರ್ಥದಿ ಕಳೆಯೆ ಕರ್ಮವನು ॥ ೩೮೯

ತೀರ್ಥಮಹಿಮೆಯುದೆನಿತು ಪುಣ್ಯಕೆ
ಸಾರ್ಥಕವೊ ಜನಕೆಂಬ ತೆರದಲಿ
ಪೂರ್ತಿಗೊಳಿಸಿದನದರ ಜಳಕವ ಭದ್ರಮತಿಯಂದು ।
ತೀರ್ಥದಲಿ ಮಿಂದೆದ್ದು ಬಳಿಕ ಯ
ಥಾರ್ಥಗಳಿಸಿದ ತನ್ನ ಭೂಮಿಯ
ಸಾರ್ಥಕಕೆ ತಾನಿತ್ತ ದಾನವನೋರ್ವ ಭೂಸುರಗೆ ॥ ೩೯೦

ದಾನವನು ತಾನಿತ್ತು ಭೂಮಿಯ
ಧ್ಯಾನಿಸಲು ಶ್ರೀ ವೆಂಕಟೇಶನ
ದಾನವಾರಿಯ ದಯದಿ ಲಭಿಸಿತು ಸಿರಿಯು ಸಂಪದವು ।
ಜ್ಞಾನಿ ಬ್ರಾಹ್ಮಣ ತನ್ನ ಮಡದಿಯು
ಮೌನದಲಿ ನೆನೆನೆನೆದು ಸಂತಸ
ಮನದಿ ಕಾಲವ ಕಳೆಯುತಿರ್ದನು ಸಿರಿಯ ಸೋಗಿನಲಿ ॥ ೩೯೧

## ಕಪಿಲ ತೀರ್ಥ

ಕಪಿಲನೆಂಬ ಮಹರ್ಷಿಯೋರ್ವನು
ವಿಪಿನದಲಿ ಶಂಕರನ ಪ್ರಾರ್ಥಿಸಿ
ತಪವನಾಚರಿಸುತಲಿ ಕಳೆದನು ಬಹಳ ಕಾಲವನು ।
ಕಪಿಲನೀಶರಗೈದ ತಪನ
ವಿಪುಲ ಭಕ್ತಿಗೆ ಮೆಚ್ಚಿ ಶಂಕರ
ಸುಫಲದಯದಿಂದಿತ್ತ ದರುಶನ ತನ್ನ ಸಖಿಯೊಡನೆ ॥ ೩೯೨

ಇದುವೆ ಸ್ಥಳದಲಿ ಪಾರ್ವತಿಯ ಪತಿ
ಮೃದು ವಚನದಿಂದೀಯೆ ದರುಶನ
ಇದಕೆ ಕಪಿಲನ ಹೆಸರು ಬಂದಿತು ಕಪಿಲ ತೀರ್ಥದಲಿ ।
ಒದಗಿದತಿ ಬವಣೆಗಳ ಜನರುಗ
ಳಿದರ ಸ್ನಾನದಿ ಕಳೆಯುತಿರುವರು
ಮುದದಿ ತಮ್ಮಯಭೀಷ್ಟವೆಲ್ಲವನಿಲ್ಲಿ ತೀರ್ಥದಲಿ ॥ ೩೯೩

ಪೂರ್ವದಲಿ ನಿಜರಾಜ ಪುರಂದರ
ಸಾರ್ವಭೌಮನು ಧರ್ಮನಿರುತದೊ
ಳೋರ್ವನೇ ತಾನೆಂಬ ತೆರದಲಿ ರಾಜ್ಯವಾಳುತಲಿ ।
ಗರ್ವಿಗಳ ಶಿಕ್ಷಿಸುತ ಜನರಿಗೆ
ಸರ್ವಕಾಲದ ಶಾಂತಿಯನು ತಾ
ಸರ್ವರಿಗು ನೆಲೆಯೂರಿ ಕಳೆಯುತಲಿರ್ದ ಕಾಲವನು ॥ ೩೯೪

ಚಿಂತೆಯಲಿ ಬಹುದಿನ ಪುರಂದರ
ಭ್ರಾಂತನಾದನು ಮನಕೆ ನೆಮ್ಮದಿ
ಯಾಂತು ಕಾಣದೆ ದೊರೆಯು ನಿಜಸಂತಾನಶೂನ್ಯದಲಿ ।
ಶಾಂತಿಯಿಂದಿವ ಕಂತುಜನಕನ
ಕಾಂತೆಯನು ಧ್ಯಾನಿಸುತ ಪಡೆದನು
ಶಾಂತತೆಗೆ ಹೆಸರಾದ ಕುವರನ ಹೆಸರು ಮಾಧವನು ॥ ೩೯೫

ಪ್ರೀತಿಯಿಂದೌದಾರ್ಯದಲಿ ನಿಜ
ಮಾತಪಿತರುಗಳವನ ಸಲಹುತ
ಲಾತನವ್ವನವಧರಿ ಬೆಳೆದನು ಸಕಲ ವಿದ್ಯೆಯಲಿ ।
ಈತ ಮಾಧವನತಿಶಯೋಕ್ತಿಯು
ಮಾತು ಧರೆಯೊಳಗೆಲ್ಲ ಬೆಳಗಲು
ಪ್ರೀತಿಯಿಂದಾ ಪಾಂಡ್ಯರಾಜನ ಕುವರಿಯುದ ಕೇಳಿ ॥ ೩೯೬

ಸೋಕೋಶ್ರೀ

ತನ್ನ ಪಿತನಿಗೆ ಮನದಭೀಷ್ಟವ
ನಿನ್ನ ತಿಳಿಸಲು ಪಾಂಡ್ಯರಾಜನು
ಸನ್ನುತಾಂಗಿ ಸುಶೀಲೆಯೊಪ್ಪಿದ ಯುವಕ ಮಾಧವಗೆ ।
ತನ್ನ ಕುವರಿಯನಿತ್ತು ಮದುವೆಯ
ಚನ್ನಬಾಂಧವರೊಡನೆ ನಡೆಸಿದ
ನಿನ್ನ ರಾಜಕುಮಾರ ಮಾಧವಗಧಿಕ ವೈಭವದಿ ॥ ೩೯೭

ಮೇದಿನೀಪತಿ ಸತಿ ಸುಶೀಲೆಯು
ವೇದಪಾರಾಯಣಾದಿ ಧರ್ಮದ
ಸಾಧನವನರಿತಿದ್ದ ಸದ್ಗೃಹಿಣಿಯಾಳು ಶೀಲದಲಿ ।
ಮಾಧವನು ಕಾಮಾಂಧಕಾರದಿ
ಸಾಧಿಸಲು ತನ್ನಿಚ್ಛೆಯನು ಬಲು
ಕಾದಿದನು ತನ್ನರಸಿಯೊಳು ತಾನೊಂದು ಹಗಲಿನಲಿ ॥ ೩೯೮

ಸುಗುಣಮತಿ ಸಂಶೀಲೆಯೊಪ್ಪದೆ
ಮೃಗಸಮೂಹಕೆ ಖೇಚರಗಳಿಗೆ
ಹಗಲಿನಲಿ ಸಂಭೋಗವಲ್ಲದೆ ನಮಗೆ ತರವಲ್ಲ ।
ಹಗಲಿನಲಿ ಸಂಭೋಗಿಪುದು ಬಹು
ಯುಗಯುಗಾಂತರ ಪಾಪವಲ್ಲದೆ
ಜಗಕೆ ಸೊಗಸದು ಬೇಡುವೆನು ನಾ ಬೇಡವೆಂದೆನಲು ॥ ೩೯೯

ಹೆಂಡತಿಯೊಳು ವಿರಕ್ತಿ ಹೊಂದಿದ
ಗಂಡ ಮಾಧವನಡವಿ ಮಾರ್ಗದಿ
ಗುಂಡಿಗೆಯ ತಾಪದಲಿ ಹೋಗುತಲೊಂದು ತರುವಿನಡಿ ।
ಕಂಡು ಸುಂದರಿಯೋರ್ವಳನು ಮುಂ
ಕೊಂಡು ಬಯಸುತಲವಳ ಸಂಗವ
ಮಂಡೆಯನು ಮಂಡೂಡಿ ಬೇಡಿದ ಮೋಹಮುಗ್ಧಳ ॥ ೪೦೦

ತರುಣಿಮಣಿ ನೀನಾರು ನಿನ್ನಯ
ಪುರವದಾವುದು ನಿನ್ನ ಚೆಲುವಿಗೆ
ದೊರೆಯು ನಾ ಸೋತಿಹೆನು ಬಾ ಕೊಡುವೆನು ನಾನೆನಲು ।
ಧರಣಿಪತಿಯನ್ನೆಸರು ಕುಂತಳೆ
ದೊರೆಗೆ ಸರಿನಾನಲ್ಲ ವೈಶ್ಯಳು
ಶರಣು ಹೊಗುವೆನು ಬೇಡವೆಂದಳು ತರುಣಿಯರಸನಿಗೆ ॥ ೪೦೧

ನರನು ತಾ ಕಾಮಾಂಧನಾದರೆ
ನರಳುವನು ಬಹುವಿಧದೊಳಲ್ಲದೆ
ತರುಣಿಯರ ನಿಜಗುರುತನರಿಯದೆ ಮರುಳನಾಗುತಲಿ ।
ಶರಣುತರೆಂದವಳ ಕಡೆಯಲಿ
ಚರಣವಿಡಿಯಲು ಹೇಸನೆಂಬುದ
ನರಿತವರು ತಾ ಜಾಣರಲ್ಲವೆ ತನ್ನ ಬಾಳಿನಲಿ ॥ ೪೦೨

ಕಾಮವೇ ಕಡುಪಾಪ ಬಂಧನ
ಕಾಮವೇ ದುಷ್ಕರ್ಮದೆವ್ವನ
ಕಾಮವೇ ಸಕಲೆಲ್ಲ ನಾಶದ ಪಾಶ ಮನುಜರಿಗೆ ।
ಕಾಮವೇ ಕಾಮಕ್ರೋಧ ಕತ್ತಲೆ
ಕಾಮವೇ ಹೊಂಗನಸು ಬಾಳಿಗೆ
ಕಾಮವೇ ವೈರಾಗ್ಯ ಕಡೆಯಲಿ ಜೀವಕಂಟಕಕೆ ॥ ೪೦೩

ಹೆಣ್ಣನೊಲುಮೆಯು ಬೇಕು ಗಂಡಿನ
ಕಣ್ಣತೆರಸಲ್ಕಲ್ಲದಲೆವಿಗೆ
ಮಣ್ಣಮುಕ್ಕಿಸಿ ಬಾಳ ಕೆಡಿಸಲ್ಕಲ್ಲ ಜೀವನದಿ ।
ಹೆಣ್ಣು ತಾ ಬಯಸುವುದು ಗಂಡನು
ಕಣ್ಣುಸಲಿಗೆಯ ಮಾತ್ರದಿಂದದ
ನಣ್ಣ ನೀ ನರಿತಿರ್ದರದು ಬಲು ಸೊಗಸು ಜೀವಿತಕೆ ॥ ೪೦೪

ನಾರಿ ತನ್ನಯ ಸೂಕ್ಷ್ಮದೊಲುಮೆಗೆ
ಹಾರಿಸುವಳೀ ಬುದ್ಧಿ ಶೂನ್ಯನ
ದಾರಿಗೂ ವ್ಯಮರೆಸುವುದು ಸ್ತ್ರೀರೂಪಿನಗ್ಗಳಿಕೆ ।
ಚಾರುಗುಣ ಸಂಪನ್ನನೋರ್ವ ವಿ
ಚಾರಮತಿಯುದನರಿತು ಸಿಲುಕನು
ನಾರಿಯರ ಸಮ್ಮೋಹನಾಸ್ತ್ರಕೆ ಜಾಣ ಸತ್ಪುರುಷ ॥ ೪೦೫

ವನಿತೆಯರುಗಳು ನಾಲ್ಕುಮಂದಿಯು
ಜನರ ಮನಸಿಗದೆಷ್ಟು ಗಣ್ಯರು
ನೆನೆದ ಮನುಜಗೆ ನಾಲ್ಕುಯುಗಗಳ ಮಹಿಮೆಯಾಧರಿಸೆ ।
ವನಿತೆ ರೇಣುಕೆ ಸತ್ಯಯುಗದಲಿ
ಜನಕಸುತೆ ತ್ರೇತೆಯಲಿ ಕಾರಣ
ಮುನಿದ ದ್ರೌಪದಿ ದ್ವಾಪರದಿ ವರಲಕ್ಷ್ಮಿ ಕಲಿಯುಗದಿ ॥ ೪೦೬

ಮಾಧವನು ಕುಂತಳೆಗೆ ನೀತಿಯ
ಬೋಧಿಸುತಲೀ ತೆರದಿ ನಿನ್ನವ
ಳಾದನೆನ್ನುವ ತೆರದಿ ರಮಣಿಯ ಮನವ ತಿರುಗಿಸಿದ ।
ಆದುದಿವರಿಗೆ ಶುಭವಿವಾಹವು
ಸಾಧಿಸಿದರವರಿಚ್ಛೆಯನು ತಂ
ಪಾದ ವಿಪಿನದೊಳಷ್ಟು ಕಾಲವು ಪುರವ ನೆನೆಯದಲೆ ॥ ೪೦೭

ಕೂಡಿ ಬಾಳಿದರಿವರು ಕೆಲದಿನ
ನೋಡಿ ದಣಿದಾದ್ಯವಿವರನು
ಬೇಡ ನೀನಿನ್ನೆಂದು ಕುಂತಳೆಗಿತ್ತ ಮರಣವನು ।
ಜೋಡಿಯಗಲಿದ ಮಾಧವನು ಕೊಂ
ಡಾಡಿ ನಿಜಸತಿಗಿದ್ದ ಗುಣಗಳ
ಕಾಡಿನಲಿ ಮತಿಗೆಟ್ಟು ತಿರುಗುತಲಿರಲು ಭ್ರಾಂತಿಯಲಿ ॥ ೪೦೮

ಒಂದು ದಿನ ಮಾಧವನು ಯಾತ್ರಿಕ
ವೃಂದದೊಳು ತಾ ಬೆರತು ತಿರುಪತಿ
ಗೆಂದು ಬಂದವ ಮುಳುಗಿ ಕಪಿಲೆಯ ಶ್ರೇಷ್ಠ ತೀರ್ಥದಲಿ ।
ಬಂದವರು ನಡೆದಂತೆ ಮಾಧವ
ನೊಂದು ತೋರದೆ ಪಿತೃದೇವತೆ
ಗೆಂದು ಪಿಂಡಪ್ರದಾನ ಮಾಡಿದ ಫಲವು ದೇವತೆಗೆ ॥ ೧೦೯

ಗಿರಿಯೊಡೆಯ ಶ್ರೀ ವೆಂಕಟೇಶನ
ನರಸಿ ಬೆಟ್ಟವ ಹತ್ತಿ ದೇವನ
ದರುಶನವ ಮಾಧವನು ಪಡೆದನು ಭಕ್ತರೊಡಗೂಡಿ ।
ಕರುಣಾಮಯ ಸಂಪ್ರೀತಮೂರ್ತಿಯ
ದರುಶನದಿ ಸುಜ್ಞಾನ ಪಡೆಯುತ
ಮರಳಿದನು ಸತಿ ಸುಶೀಲೆಯ ನೆನೆಯುತರಮನೆಗೆ ॥ ೧೧೦

ನೋಡಿ ತನ್ನಯ ಪತಿಪದಕೆ ಕರ
ಜೋಡಿಸುತ ಶಿರಬಾಗಿ ನಲಿದಳು
ಬಾಡಿಬೆಂಡಾಗಿದ್ದ ರಾಜಕುಮಾರಿ ಪತಿಯೊಡನೆ ।
ರೂಢಿಯಲಿ ಹೆಸರಾಯ್ತು ಜಳಕವ
ಮಾಡಿ ಕಪಿಲೆಯೊಳೀಗೆ ಪಿಂಡವ
ಕೊಡುವುದು ಪಿತೃದೇವತೆಗಳಿಗೆ ಮೋಕ್ಷಫಲವೆಂದು ॥ ೧೧೧

ಇನಿತು ತೆರದಲಿ ವೆಂಕಟಾಚಲ
ದನಿತು ಪುಣ್ಯಪುರಾಣ ತೀರ್ಥಗ
ಳನವರತ ನಿಜಭಕ್ತಕೋಟಿಗೆ ನಿತ್ಯನಿಯಮದಲಿ ।
ಮನದಭೀಷ್ಟವ ಗಳಿಸಿ ಕೊಡುತಿಹ
ಘನಮಹಿಮ ಶ್ರೀ ವೆಂಕಟೇಶನ
ನನುದಿನವು ನೆನೆವರಿಗೆ ನೀಡುವ ಸರ್ವಮಂಗಳವ ॥ ೧೧೨

ಜಯತು ಜಯ ಶ್ರೀ ವೆಂಕಟೇಶನೆ
ಜಯತು ಜಯ ಜಯ ಶ್ರೀನಿವಾಸನೆ
ಜಯತು ಜಯಶ್ರೀ ತಿರುಮಲೇಶ್ವರ ನಿತ್ಯಭಕ್ತವರ ।
ಜಯತು ಜಗದಾಧಾರ ಪುರುಷನೆ
ಜಯತು ಜಯ ಜಗಮೋಹನಾಂಗನೆ
ಜಯತು ಜಯಜಯ ವರದಹಸ್ತನೆ ಜಯ ನಮೋನಮಃ ॥೪೧೩॥

ಚಾರುವೇದಕೆ ಮತ್ಸ್ಯನೆನಿಸಿದೆ
ಮೇರುವಿಗೆ ಕೂರ್ಮಾಂಗವೆತ್ತಿದೆ
ಧಾರುಣೀಯ ವರಾಹ ತರಳೆಗೆ ವರದ ನರಸಿಂಹ ।
ಮೀರಿದಾ ಬಲಿವಧೆಗೆ ವಾಮನ
ವೀರಕ್ಷಿತಿಪರ ಪರಶುರಾಮನೆ
ಚೋರಧನುಜಗೆ ರಾಮ ಗೋಪಕ ಕೃಷ್ಣ ನಿನಗೆ ನಮೋ ॥೪೧೪

ಕಲಿಯುಗದಿ ಶಿಲೆಯಾಗಿ ಭಕ್ತರಿ
ಗೊಲಿದು ವರಗಳನೀವ ನಿನ್ನಯ
ಚಲುವ ನೆಲೆಯಾಗಿರಲಿ ಎನ್ನಯ ಹೃದಯ ಮಂದಿರದಿ ।
ಸುಲಭದಲಿ ಸರ್ವೇಷ್ಟದಾಯಕ
ನಿಳಗೆ ಸಿರಿವೈಕುಂಠ ತಿರುಮಲೆ
ನಿಲಯ ನೀನೆನಗೊಲಿದು ಕರುಣಿಸು ನಿನ್ನ ಸ್ಮರಣೆಯನು ॥೪೧೫

ತಿರುಮಲೇಶ್ವರ ಭವದ ಭಯದಲಿ
ಕರೆವ ಹಕ್ಕೆನಗುಂಟು ನಿನ್ನನು
ಕರೆವೆ ಯಾರನು ನೀನು ನಿನ್ನಯ ಭವದ ಬೇಗೆಯಲಿ ।
ಕರುಣಿಸಲು ನೀನುಂಟು ಸರ್ವರ
ತಿರುಪತಿಯ ಗೋವಿಂದನೆಂದರೆ
ಪರಮ ಮಂಗಳಮೂರ್ತಿ ನಿನ್ನನು ಕರುಣಿಸುವರಾರು ॥ ೪೧೬

ದೇವದೇವನೆ ನಿನ್ನ ಪದವಿಯು
ದಾನವರಿಯಲಿ ದೊರೆಕಿತದನೀ
ನೀವುದಾದರೆ ದಾರಿಗೀಯುವೆ ಭಕ್ತಕೋಟಿಯಲಿ ।
ಭಾವಭಕ್ತಿಯೊಳಿಂದು ಭಜಿಸುವೆ
ನೀವು ಕರುಣಿಸಬಾರದೇತಕೆ
ಭಾವಜೆಯು ಮನಧಾಮು ನಿನ್ನಯ ಭವ್ಯ ಕರುಣೆಯನು ॥ ೧೦೭

ಕಣ್ಣದುರು ರವಿಯಾಗಿ ಬೆಳಗಿದೆ
ಹುಣ್ಣಮೆಗೆ ಶಶಿಯಾಗಿ ಕಣುದೆ
ಮಣ್ಣನಲಿ ಫಲಭರಿತ ಸಸಿ ನೀನಾದೆ ಸರ್ವರಿಗೆ ।
ಹೆಣ್ಣು ಹೊನ್ನಿನ ಮೋಹವಡರಿಸಿ
ಬಣ್ಣಗುಂದಿರುವೆಲ್ಲರನು ನ
ಮ್ಮಣ್ಣ ನೀ ಮೈದೋರಿ ರಕ್ಷಿಸೊ ವೆಂಕಟಾಚಲನೆ ॥ ೧೦೮

ಸರ್ಪಶಯನನೆ ಕಾಂತಿಯಲಿ ಕಂ
ದರ್ಪಜನಕನೆ ಭಕ್ತಜನ ಸಂ
ಕರ್ಪಣೆಗೆ ಸಯಾರಿ ವಿವಿಧ ವಿಹಾರಿ ಮುರವೈರಿ ।
ದರ್ಪರಹಿತ ವಿಲಾಸಿ ಗಿರಿಯೊಳ
ಗಿರ್ಪ ನಿನ್ನಡಿದಾವರೆಗೆ ನಾ
ನರ್ಪಿಸುವೆ ನನ್ನೆಲ್ಲವನು ನಿನ್ನೊಲುಮೆಯಾರ್ಥಿಸುತ ॥ ೧೦೯

ಭೂನಿವಾಸನೆ ಭಜಿಪ ಜಿಹ್ವೆಯು
ಶ್ರೀನಿವಾಸನೆ ಕೊಡರಿದಾಭವ
ಹಾನಿ ಹಾತ್ರನೆ ವಿವಿಧ ಪೂಜೆಗೆ ವರದ ಹಸ್ತಕನೆ ।
ದೀನದಲಿತೋದ್ಧಾರನಾಥನೆ
ಮೌನಿಜನ ಸಂಪ್ರೀತದಾತನೆ
ಧ್ಯಾನಿಸುವೆನನಗೊಲಿದು ಕರುಣಿಸೊ ವೆಂಕಟಾಚಲನೆ ॥ ೧೧೦

ಯಕ್ಷರಾಕ್ಷಸ ಗರುಡವರ್ಗಕೆ
ಲಕ್ಷಲಕ್ಷಾಭೀಷ್ಟ ವರಗಳ
ನಕ್ಷಯದಿ ನೀನಿತ್ತು ಸಲಹಿದೆ ಸರ್ವಕಾಲದಲಿ ।
ಅಕ್ಷಿಗಳು ರವಿಶಶಿಗಳಾಗಿರೆ
ಕುಕ್ಷಿಯಲಿ ಬ್ರಹ್ಮಾಂಡ ಧರಿಸಿಹ
ಪಕ್ಷಿವಾಹನ ಸಲಹು ಬೇಡುವ ಮರುಳು ಮಾನವರ ॥ ೪೨೧

ತಿರುಮಲೇಶ್ವರ ನಿನ್ನನರಸುತ
ಗಿರಿಗೆ ಬರುತಿಹ ನಿತ್ಯ ಭಕ್ತರ
ದರುಶನವು ತಾ ನಿನಗೆನಿತು ಭಾಗ್ಯದ ಬಾಗಿಲಾಗಿಹುದೊ ।
ಕರುಣವದು ನಿನ್ನಿಷ್ಟವಾದರೆ
ನರರುಗಳ ಗತಿಯೇನು ವಿವರಿಸು
ಸಿರಿಯರಸ ಶ್ರೀ ವೆಂಕಟೇಶನೆ ಮಂದಮತಿಯುತಗೆ ॥ ೪೨೨

ಹಾಡಿದರೆ ನೀನೊಲಿವು ಕೇಳುವೆ
ಕಾಡಿದರೆ ನೀನಲಿವೆ ಬಲುಕೊಂ
ಡಾಡಿದರೆ ಮನತಣಿವೆ ನಿನ್ನಯ ನಾಮ ಸಾವಿರವ ।
ಬೇಡಿದರೆ ನೀ ಕೊಡುವೆ ನೆನದುದ
ರೂಢಿಯಲಿ ನೀ ಹಿರಿಯ ನಿನ್ನಯ
ನೋಡಿದಾತನೆ ಧನ್ಯ ಬೇಡುವೆ ನೀಡು ದರುಶನವ ॥ ೪೨೩

ಮಾನವರು ನಾವೆಲ್ಲ ಮರುಳರು
ಜ್ಞಾನಿಯದು ನಿನಗಿಷ್ಟವೇ ನಾ
ನೇನ ಬಲ್ಲೆನು ನಿನ್ನ ನಾಟಕದಭಿನಯಾಂಕಗಳ ।
ಮಾನನಿಧಿ ನೀನಿರಲು ದೀನರಿ
ಗೇನು ಕಂಟಕವಿಲ್ಲ ನಿಜವಿದು
ಶ್ರೀನಿವಾಸನೆ ಪೊರೆಯೊ ನಿನ್ನಯ ಭಕ್ತಮಂಡಲಿಯ ॥ ೪೨೪

ವೆಂಕಟಾಚಲದೊಡೆಯ ದೀನರ
ಸಂಕಟಾಂತಕ ನಿನ್ನ ನಾಮಗ
ಳಂಕವರಿಯದ ಬಾಯತೊಡರುವೆ ತಿಳಿದು ನೀನಿದನು ।
ಮಂಕು ಜನರೋದ್ಧಾರ ಸಲಹೈ
ಪಂಕಜೋದ್ಭವಪಿತನೆ ಶ್ರೀಮ
ದ್ವೆಂಕಟೇಶ್ವರನೆಂಬ ಕಲಿಯುಗ ಶ್ರೇಷ್ಠ ನಾಮದಲಿ ॥ ೧೨೫

ಕರೆದ ಭಕ್ತರನೇಕ ಮನುಮುನಿ
ಕರೆಯ ಮನ್ನಿಸಿ ಕಾಯ್ದು ಭವದಲಿ
ಕರುಣಮಯನೆಂದೆನಿಸಿಕೊಂಡಿಹ ಹರಿಯೆ ನೀನೆನ್ನ ।
ಮೊರೆಯಲಾಲಿಸಲೆಂದು ನಾನನ
ವರತ ಜಪಿಸುವೆ ನಿನ್ನ ಚರಣದಿ
ವರದ ನೀನಾಗೆಂದು ಭಕ್ತರ ನಿತ್ಯ ಬವಣೆಯಲಿ ॥ ೧೨೬

ಸರ್ವಕಾಲಕೆ ಸರ್ವಹಿತಜನ
ಸಾರ್ವಭೌಮನೆ ಸರ್ವಗತಗುಣ
ಸರ್ವರಿಗೆ ಸರ್ವಜ್ಞ ಸರ್ವದ ಸರ್ವಶ್ರೇಷ್ಠಪದ ।
ಸರ್ವಕಲ್ಯಾಣಾರ್ಥ ಸಾಧಕ
ಸರ್ವಯುಗ ಸರ್ವೇಶ ಸರ್ವಕೆ
ಸರ್ವಸರ್ವಾಭೀಷ್ಟದಾಯಕ ವೆಂಕಟೇಶ್ವರನೆ ॥ ೧೨೭

ಕೂಗಿ ಕರೆಯುವೆ ಬಾರದಿರೆ ಶಿರ
ಬಾಗಿ ಬೇಡುವೆ ಒಲಿಯದಿರಲಿಂ
ತಾಗಿ ಹಾಡುವೆ ನಿನ್ನ ನಾಮಾವಳಿಯ ರಾಗದಲಿ ।
ರೋಗರಹಿತ ಸುರೇಶಹಿತ ಭವ
ರೋಗ ಪಂಡಿತ ಮರೆಯದನ್ನವ
ನಾಗಿ ಬಾರೈ ವೆಂಕಟೇಶ್ವರ ನಿತ್ಯ ಸತ್ಯವರ ॥ ೧೨೮

ಸತ್ಯಮಯ ಸತ್ಯೇಶ ಸಾತ್ವಿಕ
ಸತ್ಯ ಸತ್ಯಾನಂದ ಸತ್ಯಾ
ಸತ್ಯಸತ್ವ ಫಲಾಬ್ಧಿ ಪೂರಿತ ಮರ್ತ್ಯ ಮಾಂಡಲಿಕ ।
ನಿತ್ಯನಿರ್ಮಲ ಸತ್ಸಮೂಹಿಕ
ಸತ್ಯವರ್ಧಕ ಸತ್ಯಸಾಧಕ
ನಿತ್ಯಸತ್ಯಾಧಾರ ಕರುಣಿಸೋ ನಿತ್ಯನಿರ್ಮಲವ ॥ ೪೨೯

ರತಿಪತಿಯ ಪಿತ ನಿನ್ನ ನಾಮದೊ
ಳತಿಶಯದ ಸವಿಯುಂಡು ತಣಿಯುವ
ಮತಿಯುತರು ಬಹು ಭಾಗ್ಯವಂತರು ಮನುಜ ಜನ್ಮದಲಿ ॥
ಪತಿತ ಪಾವನನೆಂಬ ಬಿರುದಾಂ
ಕಿತನೆ ನಿನ್ನನಂ ಬೇಡುವೆನು ಚಿರ
ಹಿತವ ಕರುಣಿಸಿ ಕಾಯೋ ಶ್ರೀಮದ್ವೆಂಕಟೇಶ್ವರನೆ ॥ ೪೩೦

ವೇದ ಪಠಣ ನಿನಾದ ಸತ್ವನೆ
ಮೇದಿನೀಪತಿ ಶ್ರೀನಿವಾಸನೆ
ನಾದಮಯ ಸಂಪೂರ್ಣ ಪುರುಷಾಕಾರ ವಿವಿಧವರ ।
ಸಾಧುಜನ ಸಂತುಷ್ಟದಾಯಕ
ಬಾಧೆಗಳ ಭವರೋಗ ವೈದ್ಯನೆ
ಕಾದಿರುವ ನಿನ್ನಧಿಕ ಭಕ್ತ ಸಮೂಹವನು ಸಲಹೊ ॥ ೪೩೧

ಕರೆಕರೆದು ಮರುಳಾಗಿ ಬಹುಜನ
ಮರೆಯುತಿರುವರು ನಿನ್ನ ನಾಮವ
ಕರುಣಿಸೈ ಮಂದರಿಗೆ ನಿನ್ನ ಸಹಸ್ರನಾಮವನು ।
ತಿರುಪತಿಯ ಗೋವಿಂದನನ್ನಲೊ
ತಿರುಮಲೆಯ ವರದಾತನನ್ನಲೊ
ಸಿರಿಯರಸ ಶ್ರೀ ಶ್ರೀನಿವಾಸನೆ ಕರೆಯಲೇನೆಂದು ॥ ೪೩೨

ಸರ್ವಸುರನರ ಸಾರ್ವಭೌಮ ನಿ
ಗರ್ವದಿಂದರ್ಚಿಸುವೆನ್ನಯ
ಸರ್ವಕಾಲದ ಸರ್ವನುಡಿಗಳ ನಿನ್ನ ನಾಮದಲಿ ।
ಉರ್ವಿಯಲಿ ನೀನೋರ್ವ ಭಕ್ತರ
ಸರ್ವಹಿತನೆಂದೆನಿಸಿ ಸರ್ವದ
ಸರ್ವಜನರೋದ್ಧಾರ ಕರುಣಿಸೊ ಸರ್ವಜನಹಿತವ ॥ ೪೩೩

ಮೌನಿಜನ ಸಂತುಷ್ಟದಾಯಕ
ಶ್ರೀನಿವಾಸನೆ ಸಿರಿಗೆ ನಾಯಕ
ಭೂನಿವಾಸನೆ ಭಜಕರಕ್ಷಕ ಸರ್ವಚರಜನಕ ।
ಜ್ಞಾನಿಗಳಗತಿಶಯದ ಪಾಲಕ
ಮಾನವರ ದುರ್ಮತಿ ನಿವಾರಕ
ಜಾನಕಿಯ ಸಂಪ್ರೀತಿದಾಯಕ ನಿತ್ಯಜನಭಜಕ ॥ ೪೩೪

ಜಪತಪಾದಿಗಳೆಲ್ಲ ನಿನ್ನಯ
ಸುಫಲಭರಿತೋತ್ಪಾದನೆಗೆ ನಿಜ
ವಿಪುಲ ಪುಣ್ಯಪುರಾಣ ಚರಿತನೆ ಪಾರಮಾರ್ಥಿಕನೆ ।
ಅಪರಿಚಿತ ನೀನಾಗಿ ಜನರನು
ಕುಪಿತಗೊಳಿಸಲುಬೇಡ ಬೇಡುವೆ
ವಿಪರಿತಾರ್ಥವನರಿಯದೆನ್ನಯ ಮೊರೆಯುಮನಕರಿಸೊ ॥ ೪೩೫

ವೆಂಕಟೇಶ್ವರನೆಂಬ ನಾಮವು
ಸಂಕಟಾಂತಕವೆಂದು ನಂಬಿಹ
ಕಿಂಕರರ ನೀ ಪೊರೆಯೊ ಕಲಿಯುಗದಾತ ಸರ್ವಹಿತ ।
ಮಂಕುಜನರೋದ್ಧಾರ ಕಾರ್ಯದ
ಕಂಕಣವನು ನೀನಾಗಿ ಜನಮನ
ದಂಕುರಿತ ನರಜನ್ಮಚಪಲವ ಬಿಡಿಸೊ ಮುಸುಕಿನಲಿ ॥ ೪೩೬

ಕಲಿಯುಗದಿ ಕಂಗೆಟ್ಟ ಬಹುಜನ
ಕಲಿಯುಗದ ಸರ್ವೇಷ್ಟದಾಯಕ
ಕಲಿಯುಗದ ವೈಕುಂಠ ತಿರುಪತಿಯೆಂದು ಭಾವದಲಿ ।
ಸುಲಲಿತಾತ್ಮ ವಿಚಾರಶಕ್ತಿಗೆ
ಒಲಿವೆ ನೀನೆಂಬಾಸೆಯಲಿ ಬಹು
ಬಳಲಿ ಬರುತಿಹ ನಿನ್ನ ಭಕ್ತರ ಪೊರೆಯೊ ಗೋವಿಂದ ॥ ೧೩೭

ವಿರುಪೇರುಗಳಿತ್ತು ಜನ ನಿ
ಸ್ಸಾರಗೊಳಿಸಿಹ ನಿನ್ನ ಲೀಲೆಯ
ನಾರು ಬಲ್ಲರು ಮೂರು ಲೋಕದ ಮುಖ್ಯ ಶ್ರೇಣಿಯಲಿ ।
ಪಾರುಗಾಣಿಸಬಲ್ಲೆ ಭವಗಳ
ಹಾರಿ ಕೈ ಬಿಡಬಲ್ಲೆಯೇತಕೆ
ಯಾರು ಬಲ್ಲರು ನಿನ್ನ ನಿತ್ಯಾನಂದ ನಾಟಕವ ॥ ೧೩೮

ಸವಿದು ಹಾಡಲು ನಿನ್ನ ಕೀರ್ತನೆ
ಕವಿದು ಮೊಳಗಲಿ ಹೃದಯಮಧ್ಯದಿ
ಭವವಹರಿ ಬರಿದಾದ ಮನಸಿವ ಪುಳಕಿತಾಂಕರಕೆ ।
ಕವಿಯ ವಿದ್ಯಾಜಾಲದಲಿ ನೀ
ನವಿತು ಮೊಳಗಿಸೊ ನಿನ್ನ ಲೀಲೆಯ
ಅವನಿಯೊಡೆಯನೆ ವೆಂಕಟೇಶ್ವರ ನಿನ್ನ ಭಕ್ತರಿಗೆ ॥ ೧೩೯

ಕುರುಡರಿಗೆ ಕಣ್ಣಾದೆ ಹೃದಯದಿ
ಕರುಗಳಲಿ ಹಣ್ಣಾದೆ ಸವಿಯಲು
ಮರುಳರಿಗೆ ಚಿಗುರಾದೆ ಬಾಳಿನ ದಿವ್ಯ ಮಾರ್ಗದಲಿ ।
ಸುರನರರ ವರವಾದೆ ಕರುಣದಿ
ದುರುಳ ರಕ್ಕಸಕಾಲಭೈರವ
ಕರುಣದಲಿ ಕೃಪೆಮಾಡಿ ರಕ್ಷಿಸೊ ಪಕ್ಷಿವಾಹನನೆ ॥ ೧೪೦

ಮಂದಹಾಸನೆ ಮದನಪಿತ ಗೋ
ವಿಂದ ನಿನ್ನನು ಭಜಿಸುವೆನು ನಾ
ನೊಂದೆ ವಿಧದಲಿ ಸುಂದರಾಂಗನೆ ಪದುಮ ಪಾಲಕನೆ ।
ನೊಂದುಮರಳುವ ನರರಭೀಷ್ಟವ
ಬಂದು ಸಲಹೋ ತಿರುಮಲೇಶ್ವರ
ಕಂದರುಗಳಭಿ ವಂದಿಪೆವು ನಮ್ಮಚಲ ಭಕ್ತಿಯಲಿ ॥ ೪೪೧

ಚಾರುವೇದಾಧಾರ ಪುರುಷನೆ
ಮೂರುಲೋಕಕೆ ಮುಖ್ಯಕರ್ತನೆ
ಪಾರುಗಾಣಿಸೊ ಶ್ರೀಧರನೆ ಜಯಕೀರ್ತಿಸುಧವರದ ।
ಸಾರಮಯ ಶ್ರುತಿನಾದ ವಿಷ್ಣುವೆ
ಪಾರಮಾರ್ಥ ಪರಾತ್ಪರಾರ್ಚಿತ
ಮೇರು ಭುಜಗೋವಿಂದ ರಕ್ಷಿಸೊ ನಿನ್ನ ಚರಣದಲಿ ॥ ೪೪೨

ಪೆರ್ಮೆಯಿಂದರ್ಚಿಸುವ ಭಕ್ತರ
ಮರ್ಮವನ್ನರಿದೆಲ್ಲರಿಗೆ ನಿಜ
ನಿರ್ಮಲವ ನೀನಿತ್ತು ಸಲಹೈ ಕೂರ್ಮಮೂರುತಿಯೆ ।
ಧರ್ಮಕರ್ಮದ ಬೋಧವರಿಯದೆ
ಕರ್ಮಪಡರಿದ ಸುಜನರಿಗೆ ನೀ
ಧರ್ಮದಾಯಕನಾಗಿ ಪೊರೆಯೈ ಸರ್ವಕಾಲದಲಿ ॥ ೪೪೩

ಗುರುಗಳಿಗೆ ಗುರುವಾದೆ ಭವದಲಿ
ಕರೆದವರ ಪರವಾದೆ ಶರಣರ
ಸರಳವಂದನೆ ಕರುಣಾಮಯ ನೀನಾದೆ ನರಳುವರ ।
ಧರಣಿದೇವಿಯು ದೊರೆಯು ನಿನ್ನಯ
ಪರಮ ಪಾವನ ಚರಣದಲಿ ನಾ
ಶಿರವೆರಗಿ ಬಯಸುವೆನು ಚಿನ್ಮಯ ನಾಮಸ್ಮರಣೆಯನು ॥ ೪೪೪

ಹಗೆಯ ಮಗನಿಗೆ ಮೃಗದ ಶಿರಸಿನ
ಮೊಗವ ತೋರಿದೆ ಖಗಚರನೆ ಕಲಿ
ಯುಗದಿ ನೀ ಜಗದೊಡೆಯನಾಗಿಹ ವೆಂಕಟಾಚಲದಿ ।
ಸುಗುಣ ಸುಚರಿತಯುತನೆ ನಿನ್ನನು
ಪೊಗಳುತಿಹ ಬಹುವಿಧದ ಭಕ್ತರಿ
ಗಗಣಿತಾಕ್ಷಯ ವರದ ನೀನಾಗೆಂದು ಬೇಡುವೆನು ॥ ೪೪೫

ಅರ್ಪಿಸುವೆ ಸದ್ಭಾವ ಭಕ್ತಿಯೊ
ಳರ್ಪಿಸುವೆ ಮಿಗಿಲಿಲ್ಲವದನು ಸ
ಮರ್ಪಿಸುವೆ ನಿನ್ನಿಚ್ಛೆಯಲಿ ನಿನ್ನೊಲುಮೆಗರ್ಪಿಸುತ ।
ಸರ್ಪಶಯನ ನಿನಗರ್ಪಿಸುವೆ ಕಂ
ದರ್ಪಜನಕನೆ ಭಕ್ತಿಭಾವನೆ
ಗಿರ್ಪ ನಿನ್ನಭಿಮಾನವೊಂದರ ಭಾಗದಾಳು ನೆಗೆ ॥ ೪೪೬

ವಂದಿಸುವೆ ನಾನೊಂದು ವಿಧದಲಿ
ವಂದಿಸುವೆ ನಿಜಭಕ್ತಿಭಾವದೊ
ಳೊಂದಿಸುವೆ ನಾನೊಂದನರಿಯದೆ ನಿತ್ಯನಿರ್ಮಲದಿ ।
ವಂದಿಸುವೆ ಎನ್ನಚಲ ಭಾವನೆ
ಯೊಂದೆ ನಿನ್ನಯ ಪಾದಕಮಲಕೆ
ಸಂದುವುದು ನನ್ನಿಂದ ಪಾಲಿಸೊ ವೆಂಕಟೇಶ್ವರನೆ ॥ ೪೪೭

ಮಂಗಳಂ ಶ್ರೀ ವೆಂಕಟೇಶನೆ
ಮಂಗಳಂ ಶ್ರೀ ಶ್ರೀನಿವಾಸನೆ
ಮಂಗಳಂ ತಿರುಮಲೆಯ ವರದ ವರಾಹಮೂರುತಿಯೆ ।
ಮಂಗಳಂ ವರಲಕ್ಷ್ಮಿದೇವಿಗೆ
ಮಂಗಳಂ ಪದ್ಮಾವತಿಗೆ ಜಯ
ಮಂಗಳಂ ತಿರುಪತಿಯೊಡೆಯ ಗೋವಿಂದರಾಜನಿಗೆ ॥ ೪೪೮

# ತಿದ್ದುಪಡಿ

| ಪದ್ಯ ಸಂ. | ಸಾಲು | ತಪ್ಪು | ಸರಿ |
|---|---|---|---|
| ೩ | 4 | ಸುರಗುಣ | ಸುರಗಣ |
| ೪ | 1 | ...ದ್ಭನರಸಿ | ದ್ಭವನರಸಿ |
| ೧೩ | 3 | ದನಿಸ | ದನಿಸಿ |
| ೧೪ | 3 | ಗಾಸಲ್ಕೆ | ಗಾಲಿಸಲ್ಕೆ |
| ೧೫ | 2 | ಪುರಪಾ | ಪುರುಪಾ |
| ೧೬ | 2 | ಲಕುವೀಶ | ಲಕುಮಿಶ |
| ೪೯ | 4 | ತೆರೆದಲೀ | ತೆರದಲೀ |
| ೫೫ | 1 | ದೇವನೊದೆದ | ದೇವನನೊದೆದ |
| ೬೧ | 6 | ಲೆಕ್ಕರಪ | ಲೆಕ್ಕಪ |
| ೬೭ | 2 | ಪಾಲನೊದ್ದ | ಪಾಲನನೊದ್ದ |
| ೬೭ | 5 | ...ವಲ್ಲದೆ | ...ರಲ್ಲದೆ |
| ೧೦೨ | 6 | ನಿದ್ದಡೆ | ನಿದ್ದಡೆ |
| ೧೩೪ | 2 | ಧರಣಿದೇವಿ | ಧರಣೀದೇವಿ |
| ೧೪೯ | 2 | ಕೇಳಿಲ್ಲ | ಕೇಳಿಲ್ಲ |
| ೧೭೫ | 5 | ...ವೆಂಬುದ | ...ವೆಂಬುವ |
| ೧೮೩ | 3 | ವಿಪರೀತಾರ್ಥ | ವಿಪರಿತಾರ್ಥ |
| ೨೦೬ | 3 | ನಾನನರಿ | ನಾನರಿ |
| ೨೧೯ | 6 | ಮೊರೆದ | ಯೊರೆದ |
| ೨೩೪ | 6 | ನಿದಿರೆಲ್ಲ | ನಿದರೆಲ್ಲ |
| ೨೬೨ | 2 | .. ಧಿತೊಂಡ | ...ಧಿಶ್ರೀತೊಂಡ |
| ೩೦೭ | 3 | ಳರಸಿ | ಳರಸಿ |
| ೪೧೪ | 3 | ತರಳೆಗೆ | ತರಳಗೆ |



ಈ ಪರಿಪೂರ್ಣ ಛಂದೋ ಬದ್ಧವಾದ ಭಾಮಿನೀ ಷ
ನನ್ನ ತಮ್ಮ ಶ್ರೀರಂಗಯ್ಯನು ರಚಿಸಿರುವ ಈ ದೈವಭ
" ಶ್ರೀ ವೆಂಕಟೇಶ್ವರ ದರ್ಶನ " ಕೃತಿಯನ್ನು ಓದಿ ನನ್ನ ನ
ಆನಂದಭಾಷ್ಪಭರಿತವಾದುವು. ಈ ಗ್ರಂಥವು ಕನ್ನಡ ನಾಡಿ
ಶ್ರೇಷ್ಠರಿಂದ ಮನ್ನಿಸಲ್ಪಟ್ಟು ಸಾಹಿತ್ಯ ಸಹೃದಯರುಗಳ
ಮೆಚ್ಚುಗೆಯಾಗಲೆಂದು ಹಾರೈಸಿ ಈ ಕಾವ್ಯ ಕರ್ತೃವನ್ನು
ಆಶೀರ್ವದಿಸುತ್ತೇನೆ.

**ಸೋ. ಕೋ. ಬ**

ಸೋಮಸಾಗರ, ಮ
ನೆಲಮಂಗಲ ತಾಲ್ಲೂಕು, ಬೆಂಗಳೂರು

**ಬೆಲೆ : ರೂ. 25-00**